# ಬಯಕಾರ ರಾಮಪ್ಪಯ್ಯನ ಕೆರೆಗಳು

(೨೦೧೮-೧೯ ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು
ನೋಂದಣಿ ಸಂಖ್ಯೆ : ೧೮೦೧೦೮೦೩೦೦೧೬





ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೯

# ಬಯಕಾರ ರಾಮಪ್ಪಯ್ಯನ ಕೆರೆಗಳು

(೨೦೧೮-೧೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢ ಪ್ರಬಂಧ)

**ಸಂಶೋಧಕರು**

**ನೋಂದಣಿ ಸಂಖ್ಯೆ : ೧೮೦೧೦೮೦೩೦೦೧೬**




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿದ್ಯಾರಣ್ಯ-೫೮೩೨೭೬

೨೦೧೯

# ಬಯಕಾರ ರಾಮಪ್ಪಯ್ಯನ ಕೆರೆಗಳು

(೨೦೧೮-೧೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಪ್ರೌಢ ಪ್ರಬಂಧ)

**ಸಂಶೋಧಕರು**

**ನೋಂದಣಿ ಸಂಖ್ಯೆ : ೧೮೦೧೦೮೦೩೦೦೧೬**




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿದ್ಯಾರಣ್ಯ-೫೮೩೨೭೬

೨೦೧೯

# ಪರಿವಿಡಿ

# ೧. ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಸಮೀಕ್ಷೆ

೧.೪ ಅಧ್ಯಯನದ ವಿಧಾನ

೧.೫ ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

### ಪ್ರಸ್ತಾವನೆ

ಭೂಮಿಯ ಮೇಲೆ ಸಹಸ್ರಾರು ಜೀವಿಗಳು ಜೀವಿಸಲು ಮುಖ್ಯ ಕಾರಣ ನೀರು. ಈ ನೀರು ಪಂಚಭೂತಗಳಲ್ಲಿ ಒಂದು, ಆದ್ದರಿಂದ ಪ್ರತಿಯೊಂದು ಜೀವಿಗೂ ಇದರ ಅವಶ್ಯಕತೆ ಇದೆ, ಮಾನವ ತನ್ನ ಜೀವನ ಕಟ್ಟಿಕೊಳ್ಳಲು ನೀರು ಪ್ರಮುಖವಾದ ಅಂಶವಾಗಿದೆ, ಈ ಹಿಂದೆ ಶಿಲಾಯುಗದ ಮಾನವ ಒಂದು ಕಡೆ ನೆಲೆ ನಿಲ್ಲಲ್ಲು ಪ್ರಧಾನ ಕಾರಣ ಈ ನೀರಿನ ವ್ಯವಸ್ಥೆ. ಅದ್ದರಿಂದಲೇ ಆನೇಕ ನಾಗರಿಕತೆಗಳು ನದಿ ದಂಡೆಯ ಮೇಲೆ ನೆಲೆ ನಿಂತಿವೆ. ನೀರು ಮಾನವನ ಅವಿಭಾಜ್ಯ ಅಂಗ ಎನ್ನಬಹುದು. ಮೂಲ ಸ್ವರೂಪದಲ್ಲಿ ಮಾನವನ ವಲಸೆಯ ಪ್ರವೃತ್ತಿ ಬೆಳಸಿಕೊಂಡಿದ್ದ ಆಹಾರಕ್ಕಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗುವ ಪರಿಪಾಠ ಇತ್ತು, ಆದರೆ ನದಿದಂಡೆಗಳು ಮಾನವನಿಗೆ ಆಶ್ರಯ ತಾಣಗಳಾಗಿವೆ.

ಈ ಆಧುನಿಕ ಕಾಲದಲ್ಲಿ ಮಾನವನ ಜೀವನೋಪಾಯಕ್ಕೆ ಕೆರೆಗಳು, ಕಾಲುವೆಗಳು, ಸರೋವರಗಳು, ನದಿಗಳು ಮುಖ್ಯವಾಗಿವೆ. ಇವುಗಳಿಂದಲೇ ತನ್ನ ಬದುಕು ಕಟ್ಟಿಕೊಳ್ಳಲು ಅನುಕೂಲವಾಗಿದೆ. ವ್ಯವಸಾಯ, ಕೃಷಿ, ಪಶುಸಂಗೋಪನೆ, ತೋಟಗಾರಿಕೆ ಇವೆಲ್ಲವನ್ನು ಬೆಳೆಸಲು ನೀರಿನ ಅವಶ್ಯಕತೆಯಿದೆ. ಭೂಮಿಯ ಮೇಲೆ ನೀರಿನ ಪ್ರಮಾಣ ಜಾಸ್ತಿಯಿದ್ದರು, ಆದರೆ ಅದನ್ನ ಬಳಸಲು, ಕುಡಿಯಲು ಸ್ವಲ್ಪ ಪ್ರಮಾಣದ ನೀರು ಮಾತ್ರ ಯೋಗ್ಯವಾಗಿದೆ. ನೀರು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ನೀರಿಲ್ಲದೆ ಮನುಷ್ಯ ಅಷ್ಟೇ ಏಕೆ, ಇಡೀ ಜೀವಸಂಕುಲ ಬದುಕಲಾರದು. ಹಾಗಾಗಿ ನೀರು ಭೂಮಿಯ ಮೇಲಿನ ಅತ್ಯಮೂಲ್ಯ ಸಂಪನ್ಮೂಲ, ಪ್ರಪಂಚದಲ್ಲಿರುವ ಕೋಟ್ಯಂತರ ಜೀವರಾಶಿಗಳು, ಪ್ರಾಣಿಗಳು ನೀರಿನಿಂದಲೆ ಉಗಮ ಮತ್ತು ವಿಕಾಸವನ್ನು ಹೊಂದಿವೆ.

ಉಗಮ ಮತ್ತು ವಿಕಾಸದಲ್ಲಿ ನೀರಿನ ಪಾತ್ರ ಪ್ರಮುಖವಾದುದಾಗಿದೆ. ಪ್ರಾಗಿತಿಹಾಸ ಕಾಲದ ಮಾನವ ಅಲೆಮಾರಿಯಾಗಿದ್ದ, ಆತನ ಎಲ್ಲಾ ಬಗೆಯ ಕಾರ್ಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ನದಿ, ಕೆರೆ, ತೊರೆಗಳ ಸಮೀಪದಲ್ಲಿಯೇ ಕೇಂದ್ರಿಕೃತವಾಗಿತ್ತು. ಆರಂಭ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ಕ್ರಮೇಣ ಒಂದು ಕಡೆ ನೆಲೆ ನಿಲ್ಲಲು ಪ್ರಾರಂಭಿಸಿದನು. ವ್ಯವಸಾಯಕ್ಕೆ ಮೊದಲಿಗೆ ಮಳೆ ಮತ್ತು ವಿಪುಲವಾಗಿ ನೀರು ಸಿಗುವ ಜಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಸಕಾಲದ ಮಳೆಯ

ವೈಫಲ್ಯತೆಯು ಅವನನ್ನು ಆಗಿಂದ್ದಾಗ್ಗೆ ಕಷ್ಟಕ್ಕೆ ಗುರಿಪಡಿಸಿದವು. ಇದರಿಂದ ಅವನು ನೀರನ್ನು ಸಂಗ್ರಹ ಮಾಡಿ, ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳುವ ಪ್ರಯತ್ನದಲ್ಲಿ ತೊಡಗಿದ. ಮಳೆಗಾಲವು ವರ್ಷದಲ್ಲಿ ಕೆಲವು ಮಾಸಗಳು ಮಾತ್ರ ಇರುತ್ತವೆ. ಅದರಂತೆಯೇ ನದಿಯಿಂದ ಕೆಲವು ಸಾವಿರಾರು ಎಕರೆಗಳಷ್ಟು ಭೂ ಪ್ರದೇಶವು ವ್ಯವಸಾಯಕ್ಕೆ ಒಳಪಟ್ಟಿತ್ತು. ಆದುದರಿಂದ ಎಲ್ಲ ಮೂಲಗಳಿಂದ ನೀರನ್ನು ಸಂಗ್ರಹಿಸಿಟ್ಟುಕೊಂಡು, ಅಗತ್ಯವಿದ್ದಾಗ ಅತ್ಯಂತ ಸಮರ್ಪಕವಾಗಿ ಬಳಸಿಕೊಳ್ಳತೊಡಗಿದನು. ಇಂತಹ ಕೃತಕ ಸಂಗ್ರಾಹಕಗಳೇ ಕೆರೆ, ಕಟ್ಟೆ, ಕುಂಟೆಗಳಾಗಿವೆ. ಇವು ಮನವನ ಅಗತ್ಯತೆಗಳನ್ನು ಪೂರೈಸುವ ಪ್ರಾಥಮಿಕ ಮೂಲಗಳಾಗಿವೆ. ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಕಾಲಕ್ಕಾಗಲೇ ವ್ಯಾಪಕವಾಗಿ ಬೆಳೆದು, ಮಾನವ ಒಂದೆಡೆ ನೆಲೆ ನಿಂತು ತನ್ನ ಜೀವನ ಸಾಗಿಸಲು ಪ್ರಯತ್ನಿಸಿದ ಅರಸರು, ಅಧಿಕಾರಿಗಳು, ಸ್ಥಳೀಯರು ತಮ್ಮ ರಾಜ್ಯ, ಪ್ರದೇಶ, ಊರಿನ ಅಭಿವೃದ್ಧಿಯ ದೃಷ್ಟಿಯಿಂದ ಅಗತ್ಯ ನೀರಿನ ತಾಣಗಳಾದ ಕೆರೆ, ಕಟ್ಟೆ, ಕುಂಟೆಗಳನ್ನು ಅವಿಭಾಜ್ಯ ಅಂಗಗಳಾಗಿ ನಿರ್ಮಿಸಿರುವುದು ಕಂಡುಬಂದಿದೆ ಕೆರೆಯ ಪರಿಕಲ್ಪನೆಯು ಇಂದು ನಿನ್ನೆಯದಲ್ಲ.

ಇದರ ಇತಿಹಾಸವು ಬಹುಪ್ರಾಚೀನವಾದುದಾಗಿದೆ. ಅಂದಿನ ಸಮಕಾಲೀನ ಸಾಹಿತ್ಯಗಳು ಸಹ ನೀರಾವರಿ ವ್ಯವಸ್ಥೆಯನ್ನು ಕುರಿತು ಮಾಹಿತಿ ನೀಡುತ್ತವೆ. ಅದೇ ರೀತಿ ಋಗ್ವೇದ, ಯರ್ಜುವೇದ ಮತ್ತು ಅಥರ್ವಣ ವೇದಗಳಲ್ಲಿಯೂ ಕೂಡ ಕೆರೆಗಳನ್ನು ಕುರಿತು ಉಲ್ಲೇಖಗಳು ದೊರೆತಿವೆ. ಕೌಟಿಲ್ಯನ ಅರ್ಥಶಾಸ್ತ್ರ, ವಿಜ್ಞಾನೇಶ್ವರನ ಮಿತಾಕ್ಷರ, ಕಲ್ಹಣನ ರಾಜತರಂಗಿಣಿ, ರಾಮಾಯಣ, ಪದ್ಮಪುರಾಣ, ಜಾತಕ ಕಥೆಗಳು, ಶುಕ್ರನ ನೀತಿಸಾರ, ಅಮರಕೋಶ ಹಾಗೂ ತಮಿಳು ಸಂಗಮ್ ಸಾಹಿತ್ಯ ಕೃತಿಗಳು ಸಹ ಕೆರೆ ನೀರಾವರಿಯ ಅನೇಕ ವಿಚಾರಗಳನ್ನು ಕುರಿತು ಪ್ರಸ್ತಾಪಿಸುತ್ತವೆ.

ಅಭಿಲಾಷಿತಾರ್ಥ ಚಿಂತಾಮಣಿಯಲ್ಲಿ 'ದ್ವಾರ ಹೀನೋಭವೇತ್ ಕೂಪೋ, ದ್ವಾರೇಣೈಕೇನ ವಾಪಿಕ, ನೈಕದ್ವಾರಾ ಪುಷ್ಕರಿಣೇ ದೀರ್ಘಕಾರಾತು ದೀರ್ಘಕಾ, ಕುಲ್ಯ ವಿಸ್ತೃತ ತೋಯಶ್ಚ ತಟಾಕಂ ಪಿರಿಕೀರ್ತಿತಾ' ಅಂದರೆ ಬಾಗಿಲು ಇಲ್ಲದ್ದು ಕೂಪ, ಒಂದು ಬಾಗಿಲು ಇರೋದು ವಾಪಿ, ಅನೇಕ ದ್ವಾರಗಳಿರುವುದು ಪುಷ್ಕರಣಿ, ಅದರ ದೀರ್ಘಕಾರವೇ ಕಾಲುವೆ, ನದಿಗೆ ಅಥವಾ ಹೊಳೆಗೆ ಅಡ್ಡ ಕಟ್ಟಿ ಹಾಕಿ ನಿರ್ಮಿಸಿರುವುದೇ ತಟಾಕ ಅಥವಾ ಕೆರೆ ಎಂಬುದಾಗಿ ನೀರಿನ ರಚನೆಗಳ ಬಗೆಗೆ ತಿಳಿದು ಬರುತ್ತದೆ. ಅಲ್ಲಮಪ್ರಭು ತಮ್ಮ ಒಂದು ವಚನದಲ್ಲಿ

ತನುವೆಂಬ ಏರಿಗೆ ಮನವೆಂಬ ಕಟ್ಟೆ

ಆಚಾರವೆಂಬ ಸೋಪಾನ ಪರಮಾನಂದವೆಂಬ ಜಲವ ತುಂಬಿ

ಕೆರೆಯ ಕಟ್ಟಿ ಬಲ್ಲವನಾರನೂ ಕಾಣೆ

ನಾ ಕಟ್ಟಿದ ಕೆರೆ ಸ್ಥಿರವಾಗಿತ್ತು ಗುಹೇಶ್ವರ

ಎಂದು ಭೂಮಿಯ ಮೇಲಿನ ಕೆರೆಯೊಂದಿಗೆ ಮನದೊಳಗೆ ಕೆರೆ ಕಟ್ಟುವ ವಿಚಾರವನ್ನು ಶರೀರಕ್ಕೆ ಹೋಲಿಸಿ ಅರ್ಥಪೂರ್ಣವಾಗಿ ಹೇಳಿದ್ದಾರೆ. ಶಾಸನಗಳು ಇತಿಹಾಸ ಕಾಲದಿಂದ ನಮಗೆ ದೊರಕಿದ್ದು, ಇವು ಕೂಡ ಕೆರೆ ನೀರಾವರಿ ಪದ್ಧತಿಗಳನ್ನು ಕುರಿತ ಅನೇಕ ಮಾಹಿತಿಗಳನ್ನು ನೀಡಿರುವುದು ಗಮನಾರ್ಹ ಸಂಗತಿ. ನಮ್ಮ ಪೂರ್ವಜರ ಇತಿಹಾಸವನ್ನು ಬಿಚ್ಚಿಡುವಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿವೆ.

ಕರ್ನಾಟಕದಲ್ಲಿ ನೂರಾರು ಕೆರೆ, ಬಾವಿ, ಕಾಲುವೆಗಳಿವೆ. ಇವು ರೈತನಿಗೆ ಆಧಾರ ಸ್ಥಂಭವಾಗಿವೆ. ಈ ಕೆರೆಗಳನ್ನು ಉತ್ಪತ್ತಿ ಮಾಡಿದವರು, ಕಟ್ಟಿಸಿದವರು ಇಂದು ಚರಿತ್ರೆಯಿಂದ ದೂರವಾಗುತ್ತಿದ್ದಾರೆ. ಜನರ ಬದುಕಿನ ಭವಣೆಯನ್ನು ನೀಗಿಸುವ ಸಲುವಾಗಿ ಅನೇಕ ಮಹಾ ಪುರುಷರು ನೂರಾರು ಕೆರೆಗಳನ್ನ ಕಟ್ಟಿಸಿ ದನ ಕರುಗಳು, ಪಕ್ಷಿಗಳಿಗೆ, ರೈತರಿಗೆ ನೀರುಣಿಸುವ ಕಾಯಕ ಮಾಡಿದ್ದಾರೆ. ಈ ನೀರಾವರಿಯಿಂದ ಆನೇಕ ಬೆಳೆಗಳನ್ನ ಬೆಳೆಯಲು ಸಹಕಾರಿಯಾಗಿದ್ದಾರೆ. ಇಂತಹ ಅನೇಕ ತ್ಯಾಗ ಹಾಗೂ ಸಮಾಜ ಕಾರ್ಯಗಳನ್ನ ಮೈಗೂಡಿಸಿಕೊಂಡು ತನ್ನ ಸ್ವಾರ್ಥ ಇಲ್ಲದೆ ಪರೋಪಕಾರಿಗಳಾಗಿ ಸಮಾಜಕ್ಕೆ ಒಳಿತು ಮಾಡಿದವರಲ್ಲಿ ಬಯಕಾರ ರಾಮಪ್ಪಯ್ಯ ಸಹ ಒಬ್ಬನು. ಇವರು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ಹುದ್ದೆಯನ್ನು ಹೊಂದಿದ್ದು ಆ ಕಾಲಕ್ಕೆ ಅನೇಕ ಸಮಾಜಮುಖಿ ಕೆಲಸಗಳನ್ನ ಮಾಡಿದ್ದಾನೆ. ಕೆರೆ, ಬಾವಿ, ತೊಪುಗಳನ್ನು ಕಟ್ಟಿಸಿದ್ದಾನೆ, ಇವರು ತನ್ನ ಕುಟುಂಬ ಹಾಗೂ ತನ್ನ ಸಂಬಂಧಿಕರ ಹೆಸರಿನಲ್ಲಿ ಅವರಿಗೆ ಪುಣ್ಯವಾಗಲಿ ಎನ್ನುವ ದೃಷ್ಠಿಯಿಂದ ಅನೇಕ ಕೆರೆ ಬಾವಿಗಳನ್ನು ಕಟ್ಟಿಸಿದ್ದಾರೆ.

ನೀರಿನ ಅವಶ್ಯಕತೆಯನ್ನ ಮನಗಂಡು ಜನರ ಜೀವನ ನಡೆಸಲು ಇದು ಪ್ರಧಾನ ಕಾರ್ಯ ಎಂದು ಭಾವಿಸಿ ಹದಿನಾರು ಕೆರೆಗಳನ್ನು ಕಟ್ಟಿಸಿದ್ದಾರೆ. ಅವುಗಳೆಂದರೆ ಬಾಚ ಸಮುದ್ರಂ, ರಾಮ ಸಮುದ್ರಂ, ಅಕ್ಕ ಸಮುದ್ರಂ, ಕಾಮ ಸಮುದ್ರಂ, ಅಮ್ಮ ಸಮುದ್ರಂ, ವೀರ ಸಮುದ್ರಂ, ಅಚುತೇಂದ್ರ ಸಮುದ್ರಂ, ವೆಂಕಟೇಂದ್ರ ಸಮುದ್ರಂ, ಪಿನಲಕ್ಕ ಸಮುದ್ರಂ, ಚಿನತಿಪ್ಪ ಸಮುದ್ರಂ, ಪೆದಲಕ್ಕ

ಸಮುದ್ರಂ, ಅಚ್ಚುತಮ್ಮ ಸಮುದ್ರಂ, ಲಿಂಗಾಲಯ್ಯ ತಟಾಕಂ, ವೆಂಕಟಯ್ಯ ತಟಾಕಂ, ಪೆದತಿಮ್ಮ ಸಮುದ್ರಂ, ಚಿನ್ನಬಾಸ ಸಮುದ್ರಂ.

ಇವರ ಈ ಕಾರ್ಯ ಇಂದಿಗೂ ಜನ ಮನಗಳಲ್ಲಿ ಜೀವಂತವಾಗಿರುವಂತದ್ದು, ಆದ್ದರಿಂದಾಗಿ ಇತಂಹ ಸಮಾಜ ಕಾರ್ಯಗಳನ್ನು ಹಾಗೂ ಇತನ ಕುಟುಂಬದ ಬಗ್ಗೆ ಮಾಹಿತಿಯನ್ನು ತಿಳಿಯಲು ಇವರ ಶಾಸನಗಳು ಪ್ರಮುಖ ಆಧಾರಗಳಾಗಿವೆ. ಬಯಕಾರ ರಾಮಪ್ಪ ವಿಜಯನಗರ ಕಾಲವಧಿಯಲ್ಲಿ ಒಬ್ಬ ದಕ್ಷ ಆಡಳಿತಗಾರ, ನಿಷ್ಠವಂತ, ಸಮಾಜಸೇವಕನಾಗಿ ಗುರುತಿಸಿಕೊಂಡು ಹದಿನಾರನೇ ಶತಮಾನದ ಪೂರ್ವರ್ಧದಲ್ಲಿ ಬದುಕಿದ್ದ. ಇವರು ಆನೇಕ ಅಗ್ರಹಾರಗಳನ್ನು, ದೇವಾಲಯಗಳನ್ನು ಅಧಿಕ ಸಂಖ್ಯೆಯಲ್ಲಿ ನಿರ್ಮಿಸಿದ್ದಾನೆ. ಈತನು ರಾಮಮಾತ್ಯನೆಂದೂ ಪ್ರಖ್ಯಾತನಾಗಿದ್ದಾನೆ. ಇವನು ಸಂಗೀತಗಾರ, ವಾಗ್ಗೇಯಕಾರ, ವಾಸ್ತುಕಾರ ದಕ್ಷ ಆಡಳಿತಕಾರ ಹಾಗೂ ಸರ್ವತೋಮುಖ ಪ್ರತಿಭಾವಂತ.

ಈತನ ಕಾಲವಧಿಯಲ್ಲಿ ಮಾಡಿದಂತಹ ಸಮಾಜಿಕ ಕೊಡುಗೆ ಅಪಾರ ಆದ್ದರಿಂದ ಇಂದಿಗೂ ಈತನ ಹೆಸರನ್ನ ಜನಪ್ರಿಯವಾಗಿ ಹಿಡಲು ಈತನ ಸಾಧನೆಗಳೆ ಕಾರಣ. ಒಂದು ಗ್ರಾಮ ಅಭಿವೃದ್ಧಿ ಹೊಂದಲು ನೀರಿನ ಅವಶ್ಯಕತೆ ಪ್ರಮುಖ. ಇದರಿಂದಾಗಿ ಕರ್ನಾಟಕದಲ್ಲಿ ಸಾವಿರಾರು ಕೆರೆಗಳನ್ನ ರಾಜ ಮಹಾರಾಜರು, ಮಂತ್ರಿಗಳು, ಸಾಮಂತರು, ಶ್ರೇಷ್ಠ ವ್ಯಕ್ತಿಗಳು ನಿರ್ಮಾಣ ಮಾಡಿದ್ದಾರೆ. ಆದ್ದರಿಂದ ಕೆರೆಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಯಕಾರ ರಾಮಪ್ಪ ಇವರ ಅಧ್ಯಯನ ಪ್ರಮುಖವಾದದ್ದು. ಕುಟುಂಬಸ್ಥರ ಸಂಬಂಧಿಕರ ಪುಣ್ಯಕ್ಕಾಗಿ ಕೈಗೊಂಡು ಈ ಮಹಾಕಾರ್ಯ ಚರಿತ್ರೆಯ ಪೂರ್ವದಲ್ಲಿ ಇತಿಹಾಸ ನಿರ್ಮಿಸುವಂತದ್ದು.

**ಅಧ್ಯಯನದ ಉದ್ದೇಶ**

ಒಂದು ಸಾಮ್ರಾಜ್ಯದ ಇತಿಹಾಸ ಕಟ್ಟಿಕೊಡುವಾಗ ಅದಕ್ಕೆ ಸಂಬಂಧಿಸಿದಂತೆ ಮೂಲ ಆಕರಗಳು ಹಾಗೂ ದ್ವಿತಿಯಾ ಆಕರಗಳು ಪ್ರಮುಖ. ಆದ್ದರಿಂದ ಯಾವುದೇ ಚರಿತ್ರೆಯನ್ನಾಗಲಿ ಆಕರಗಳಿಲ್ಲದೆ ರಚಿಸಿದರೆ ಅದು ಆಪ್ರಯೋಜನ ಆಗಿರುತ್ತದೆ. ಇದೇ ರೀತಿಯಾಗಿ ಬಯಕಾರ ರಾಮಪ್ಪಯ್ಯನ ಕುರಿತು ಆತನ ಕೆರೆಗಳನ್ನ ಅಧ್ಯಯನ ಮಾಡುವ ಸಂದರ್ಭದಲ್ಲಿ ಆತನ ಸಮಾಜಿಕ ಕಾರ್ಯಗಳು ಇಂದಿಗೂ ಜೀವಂತವಾಗಿರುವಂತವು. ಅದರಿಂದಾಗಿ ಇವುಗಳ ಕುರಿತಂತೆ ಅನೇಕ ವಿದ್ವಾಂಸರು ಅಧ್ಯಯನ ಕೈಗೊಂಡರಾದರು, ಅವು ಅಲ್ಲಲ್ಲಿ ಅಲ್ಪಸ್ವಲ್ಪ ಮಾಹಿತಿಯನ್ನು ಕಾಣುತ್ತೇವೆ.

ಇವರ ಕಾಲಾವಧಿಯಲ್ಲಿ ನಿರ್ಮಾಣಗೊಂಡಂತಹ ಕೆರೆಗಳ ಕುರಿತಂತೆ ಸಮಗ್ರವಾಗಿ ಅಧ್ಯಯನ ನಡೆದಿರುವುದಿಲ್ಲ. ಆದಕಾರಣ ಪ್ರಸ್ತುತ ಈ ಅಧ್ಯಯನದಲ್ಲಿ ಬಯಗಾರ ರಾಮಪ್ಪಯ್ಯ ಕಟ್ಟಿಸಿದಂತಹ ಅನೇಕ ಕೆರೆಗಳನ್ನು ಹಾಗೂ ಅವುಗಳ ನಿರ್ಮಾಣ, ಸ್ಥಳ, ಅವುಗಳ ಸ್ಥಿತಿಗತಿ, ಆಕಾರ, ಇವುಗಳನ್ನು ಒದಗಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಆದ್ದರಿಂದಾಗಿ ಈ ಅಧ್ಯಯನವು ಬಯಕಾರ ರಾಮಪ್ಪನ ಕೆರೆಗಳ ಕುರಿತಂತೆ ಮಾಹಿತಿಯನ್ನು ಒದಗಿಸುವಂತದ್ದಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹಳ ಮುಖ್ಯವಾಗಿದ್ದು ಪ್ರಮುಖ ಪಾತ್ರವಹಿಸುತ್ತದೆ. ಜೊತೆಗೆ ಅಧ್ಯಯನದ ಗುಣಮಟ್ಟ ಹೆಚ್ಚಿಸಲು ಸಹಕಾರಿಯಾಗಿರುತ್ತದೆ. ಅಂದರೆ ಒಂದು ಅಧ್ಯಯನದ ಮೇರೆಗಳನ್ನು ಗುರುತಿಸುವುದು ಎಂದರ್ಥ.

ಒಂದು ವಿಷಯದ ಬಗ್ಗೆ ಅಥವಾ ಒಂದು ಸ್ಥಳದ ಬಗ್ಗೆ ಅಧ್ಯಯನ ಮಾಡಬೇಕಾದರೆ ಅದು ಎಷ್ಟರ ಮಟ್ಟಿಗೆ ತನ್ನ ಪ್ರದೇಶವನ್ನು ಎಲ್ಲಿಯವರೆಗೆ ವಿಸ್ತರಿಸಿದೆ ಎಂಬುದನ್ನು ಸ್ಪಷ್ಟವಾಗಿ ಗುರಿತಿಸುವುದು ಅಧ್ಯಯನದ ದೃಷ್ಟಿಯಿಂದ ಒಳ್ಳೆಯದು. ಪ್ರಸ್ತುತ ಅಧ್ಯಯನವು "ಬಯಕಾರ ರಾಮಪ್ಪಯ್ಯನ ಕೆರೆಗಳು" ಎಂಬ ಶಿರ್ಷಿಕೆಯ ವ್ಯಾಪ್ತಿಯನ್ನು ಆತನ ಕಾಲಾವಧಿಯಲ್ಲಿ ಜನರ ಆಶೋತ್ತರಗಳಿಗೆ ಸ್ಪಂಧಿಸಿ ಉದ್ದಾರಕ್ಕಾಗಿ ಹಾಗೂ ತನ್ನ ಕುಟುಂಬಸ್ಥರು ಮತ್ತು ಸಂಬಂಧಿಕರಿಗೆ ಪುಣ್ಯವಾಗಲೆಂದು ಕಟ್ಟಿಸಿದಂತಹ ಕೆರೆಗಳನ್ನು ಅಧ್ಯಯನ ಮಾಡುವುದು ಹಾಗೂ ಜನರ ನಂಬಿಕೆ ಮತ್ತು ಆಚರಣೆಗಳನ್ನ ಕುರಿತಂತೆ ಅಧ್ಯಯನ ಮಾಡುವುದು. ಈ ಅಧ್ಯಯನದ ಪ್ರಮುಖ ಅಂಶವಾಗಿದೆ. ಆದುದರಿಂದ ಬಯಕಾರ ರಾಮಪ್ಪನ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಕೆರೆಗಳ ಸ್ಥಿತಿಗತಿ ಕುರಿತಂತೆ ಅಧ್ಯಯನ ಮಾಡುವುದು ಪ್ರಮುಖವಾಗಿದೆ. ಈ ಎಲ್ಲಾ ಅಂಶಗಳಿಂದ **"ಬಯಕಾರ ರಾಮಪ್ಪಯ್ಯನ ಕೆರೆಗಳು"** ಎಂಬ ಶೀರ್ಷಿಕೆಯ ವ್ಯಾಪ್ತಿ ಕಾಣಬಹುದಾಗಿದೆ.

**ಅಧ್ಯಯನದ ಸಮೀಕ್ಷೆಗಳು**

ಬಯಕಾರ ರಾಮಪ್ಪಯ್ಯನ ಕೆರೆಗಳು ಕುರಿತಂತೆ ಇಲ್ಲಿಯವರೆಗೂ ಸಮಗ್ರವಾದ ಅಧ್ಯಯನಗಳು ನಡೆದಿರುವುದಿಲ್ಲ ಆದಕಾರಣ ಇಲ್ಲಿಯವರೆಗೂ ಆಗಿರುವ ಅಧ್ಯಯನಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ. ಬಯಕಾರ ರಾಮಪ್ಪಯ್ಯನ ಕುರಿತಂತೆ ಡಾ. ಎಸ್.ಎನ್. ಶಿವರುದ್ರಸ್ವಾಮಿ ಇವರು 'ಬಯಕಾರ ರಾಮಪ್ಪ' ಎಂಬ ಪುಸ್ತಕವನ್ನು ೨೦೦೦ರಲ್ಲಿ ಕನ್ನಡ

ವಿಶ್ವವಿದ್ಯಾಲಯ ಹಂಪಿ ಮೂಲಕ ಬೆಳಕಿಗೆ ತಂದಿದ್ದಾರೆ. ಬಯಕಾರ ರಾಮಪ್ಪನ ಕಾಲದ ಹಲವು ಶಾಸನಗಳನ್ನು 'ಅನ್ಯೂಯಲ್ ರಿಪೋರ್ಟ್ಸ್ ಆಫ್ ಸೌತ್ ಇಂಡಿಯ ಎಪಿಗ್ರಫಿ' ಹಾಗೂ 'ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್'ನಲ್ಲಿ ಪ್ರಕಟಿಸಲಾಗಿದೆ.

ಡಾ.ಸಿ.ಎಸ್.ವಾಸುದೇವನ ಅವರ 'ಹಂಪಿ ಪರಿಸರದ ಕೆರೆಗಳು' ಇದರಲ್ಲಿ ಬಯಕಾರ ರಾಮಪ್ಪಯ್ಯನ ಕೆರೆಗಳ ಬಗ್ಗೆ ಮಾಹಿತಿಯನ್ನು ಕಾಣುತ್ತೆವೆ. ಡಾ.ದೇವರಕೊಂಡಾರೆಡ್ಡಿಯವರು ಸಂಪಾದಿಸಿರುವ ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟಗಳಲ್ಲಿಯೂ ಈತನ ಕಾಲದ ಹಲವು ಶಾಸನಗಳು ಪ್ರಕಟವಾಗಿವೆ. ಅಲ್ಲದೇ ಡಾ.ಪರಮಶಿವಮೂರ್ತಿಯವರು ಪತ್ರಿಕೆಯೊಂದರಲ್ಲಿ ಬಯಕಾರ ರಾಮಪ್ಪನ ತಿಮ್ಮಲಾಪುರ ಶೈವ ದೇವಾಲಯದ ಶಾಸನವನ್ನು ಮರು ಪರಿಶೀಲಿಸಿ ಪ್ರಕಟಿಸಿದ್ದಾರೆ. ಅದರಂತೆ ತುಮಕೂರು ಜಿಲ್ಲೆಯ ಬೂದಿಹಾಳ್, ತಿಪಟೂರುಗಳಲ್ಲಿ ಆಂಧ್ರದ ತಿರುಪತಿ, ಕೊಂಡವೀಡುಗಳಲ್ಲಿ ಹಲವು ಶಾಸನಗಳು ಪ್ರಕಟವಾಗಿವೆ. ಕರ್ನಾಟಕ ಶಾಸನ ಸಂಪುಟ ಬಳ್ಳಾರಿ ಜಿಲ್ಲೆ ಇವುಗಳಲ್ಲಿ ಬಯಕಾರ ರಾಮಪ್ಪಯ್ಯನ ಕೆರೆಗಳ ಕುರಿತಂತೆ ಶಾಸನಗಳ ಉಲ್ಲೇಖ ಕಾಣುತ್ತೇವೆ. ಡಾ.ಶಿವರುದ್ರ ಸ್ವಾಮಿಯವರು ರಚಿಸಿದ 'ತಿಮ್ಮಾಪುರ ಅಗ್ರಹಾರದಲ್ಲಿ' ಮಾಹಿತಿಯನ್ನು ಕಾಣುತ್ತವೆ. ಅದೇ ರೀತಿ ಡಾ.ಕೆ.ಎಂ.ಸುರೇಶ ಅವರು ರಚಿಸಿರುವ 'ಟೆಂಪಲ್ಸ್ ಆಫ್ ಹಂಪಿ' ಕೃತಿಯಲ್ಲಿ ತಿಮ್ಮಲಾಪುರದ ದೇವಾಲಯಗಳ ಕುರಿತು ಪ್ರಸ್ತಾಪಿಸಿದ್ದಾರೆ. ಅಲ್ಲದೆ ತಿಮ್ಮಲಾಪುರ ಕುರಿತು ಇತಿಹಾಸ ದರ್ಶನ ಸಂ ೧೧ರಲ್ಲಿ ಲೇಖನವೊಂದು ಪ್ರಕಟವಾಗಿದೆ.

**ಅಧ್ಯಯನದ ವಿಧಾನಗಳು**

ಬಯಕಾರ ರಾಮಪ್ಪನ ಕೆರೆಗಳನ್ನು ಕುರಿತ ಈ ಅಧ್ಯಯನವು ಬಹುತೇಕ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಇದರ ಬಗ್ಗೆ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕೆರೆಗಳ ಬಗ್ಗೆ ಸಣ್ಣ ನೀರಾವರಿ ಇಲಾಖೆ, ಜಿಲ್ಲಾ ತಾಲೂಕು ಮತ್ತು ಗ್ರಾಮ ಪಂಚಾಯಿತಿಗಳು ನೀಡಿದ ದಾಖಲೆಗಳು ಮತ್ತು ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳನ್ನು ಸಂಗ್ರಹಿಸಿ ಬಳಸಿಕೊಳ್ಳಲಾಗಿದೆ. ಹಾಗೂ ಕೆರೆ, ಕೆರೆಗಳ ಏರಿ, ತೂಬು, ಕೋಡಿ ಮತ್ತು ಕಾಲುವೆ ಇವುಗಳ ಛಾಯಾಚಿತ್ರಗಳನ್ನು ಸಂಗ್ರಹಿಸಿ ಅವುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆಯಲಾಗಿದೆ.

ಈ ಮಾಹಿತಿಗಳನ್ನು ಇಂಡೆಕ್ಸ್ ಕಾರ್ಡ್‌ಗಳಲ್ಲಿ ದಾಖಲಿಸಿಕೊಂಡು ನಂತರ ವರ್ಗೀಕರಿಸಿ ವಿಷಯಗಳನ್ನು ವಿಶ್ಲೇಷಿಸಿ, ಸಂಬಂಧಪಟ್ಟ ಅಧ್ಯಾಯಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಜತೆಗೆ ಕೆರೆಗಳು ಮತ್ತು ಅದರ ಪರಿಸರದಲ್ಲಿರುವ ಶಾಸನಗಳು, ದೇವಾಲಯಗಳನ್ನು ಸಹ ದಾಖಲಿಸಿಕೊಳ್ಳಲಾಗಿದೆ. ಹಾಗೆಯೇ ಕೆರೆಗಳಿಗೆ ಸಂಬಂಧಿಸಿದ ಮೌಖಿಕ ಪರಂಪರೆ, ನಂಬಿಕೆ ಮತ್ತು ಆಚರಣೆಗಳನ್ನು ಸಂಗ್ರಹಿಸಿ, ಆ ಮೂಲಕ ಕೆರೆಗಳಿಗಿರುವ ಸಂಬಂಧವನ್ನು ಗುರುತಿಸಲಾಗಿದೆ. ಅದೇ ರೀತಿಯಾಗಿ ಅಲ್ಲಿನ ಜನರನ್ನು ಸಂಪರ್ಕಿಸಿ ಪ್ರಶ್ನಾವಳಿಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಿ, ಸೂಕ್ತ ಚಿಂತನೆ ನಡೆಸಲಾಗಿದೆ. ಬಯಕಾರ ರಾಮಪ್ಪಯ್ಯನ ಕೆರೆಗಳು ಎಂಬ ಶೀರ್ಷಿಕೆಯಡಿ ಈ ಎಲ್ಲಾ ವಿಧಾನಗಳನ್ನು ಬಳಸಿಕೊಂಡಿರುವಂತಹ ಅಧ್ಯಯನವಾಗಿದೆ.

**ಅಧ್ಯಯನದ ಸ್ವರೂಪ**

"ಬಯಕಾರ ರಾಮಪ್ಪಯ್ಯನ ಕೆರೆಗಳು" ಎನ್ನುವ ಈ ಪ್ರೌಢ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯನಗಳನ್ನಾಗಿ ಮಾಡಿಕೊಳ್ಳಲಾಗಿದೆ. ಈ ಮೂಲಕ ಪ್ರೌಢಪ್ರಬಂಧದ ರಚನಾ ಕಾರ್ಯ ನಡೆಸಲಾಗುವುದು.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ವಿಧಾನಗಳನ್ನು ವಿವರಿಸಿರುವುದಲ್ಲದೆ. ಇದುವರೆಗಿನ ಅಧ್ಯಯನಗಳ ಸಮೀಕ್ಷೆ ಮಾಡಲಾಗುವುದು.

ಎರಡನೆಯ ಅಧ್ಯಾಯದಲ್ಲಿ ಬಯಕಾರ ರಾಮಪ್ಪಯ್ಯನ ಕೆರೆಗಳು, ಪರಿಸರದ ಭೌಗೋಳಿಕ ಪರಿಸರವನ್ನು ಕುರಿತಿದೆ.

ನೆಲ-ಜಲ, ಬೆಟ್ಟ-ಗುಡ್ಡ, ಜನಸಂಖ್ಯೆ, ಅರಣ್ಯ ಮತ್ತು ಅಲ್ಲಿನ ಜನಜೀವನವನ್ನು ವಿವರಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇಲಾಖೆಗಳಿಂದ ಅಂಕಿ-ಅಂಶಗಳನ್ನು ಸಂಗ್ರಹಿಸಿದ್ದೇನೆ. ಜೊತೆಗೆ ಬಯಕಾರ ರಾಮಪ್ಪಯ್ಯನ ಚಾರಿತ್ರಿಕ ಹಿನ್ನೆಲೆ ಕಟ್ಟಿಕೊಡುವ ಸಲುವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಆತನ ಹುದ್ದೆ, ಆಡಳಿತ, ಸಾಮಾಜಿಕ ಕೊಡುಗೆ ಕುರಿತಂತೆ ಅವರ ಸಂಬಂಧವನ್ನು ವಿವರಿಸಲಾಗಿದ್ದು ಈ ಎಲ್ಲಾ ಅಂಶಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬಯಕಾರ ರಾಮಪ್ಪಯ್ಯನ ಕೆರೆಗಳು ಕುರಿತಂತೆ ಅವುಗಳ ಸ್ಥಳ, ಸ್ಥಿತಿಗತಿ, ವಿಸ್ತೀರ್ಣ, ನೀರಿನ ಸಂಗ್ರಹಣೆ, ಇದರಿಂದ ಬೆಳೆಯುವ ಬೇಳೆಗಳು, ಕೋಡಿ, ತೂಬು, ವಡ್ಡು, ಏರಿ, ಕುರಿತಂತೆ ಸಂಕ್ಷಿಪ್ತ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಯಕಾರ ರಾಮಪ್ಪಯ್ಯನ ಕೆರೆಗಳ ದಂಡೆಯ ಮೇಲೆ ಇರುವಂತಹ ದೇವಾಲಯ ಹಾಗೂ ನಂಬಿಕೆ, ಆಚರಣೆ ಕುರಿತಂತೆ ಮಾಹಿತಿಯನ್ನು ಸಂಗ್ರಹಿಸಿ ಇವುಗಳ ಬಗ್ಗೆ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯ ಸಮಾರೂಪಕ್ಕೆ ಸಂಬಂಧಿಸಿದ್ದು ಪ್ರಸ್ತುತ ಅಧ್ಯಯನದ ಫಲಿತಗಳ ಸಂಕ್ಷಿಪ್ತ ರೂಪವಾಗಿದೆ. ಕೊನೆಯಲ್ಲಿ ಅನುಬಂಧದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿ, ಛಾಯಚಿತ್ರ, ನಕ್ಷೆಗಳು, ಭೂಪಟಗಳನ್ನು ನೀಡಲಾಗಿದೆ.

# ಅಧ್ಯಾಯ ಎರಡು

# ಭೌಗೋಳಿಕ ಹಿನ್ನೆಲೆ ಮತ್ತು ಚಾರಿತ್ರಿಕ ಹಿನ್ನೆಲೆ

## ಭೌಗೋಳಿಕ ಹಿನ್ನೆಲೆ

ಪರಿಸರವು ಸಕಲ ಜೀವರಾಶಿಗಳ ಆಶ್ರಯತಾಣ. ನಿಸರ್ಗ ನಿರ್ಮಿತವಾದ ಬೆಟ್ಟ-ಗುಡ್ಡಗಳು, ಗವಿಗಳು, ಖನಿಜಗಳು, ಕಾಡು, ನದಿ ಹಳ್ಳಗಳು ಫಲವತ್ತಾದ ಮಣ್ಣು ಮೊದಲಾದವು ಪ್ರಾಣಿ ಮತ್ತು ಮನುಷ್ಯ ಸಂಕುಲಗಳ ಬೆಳವಣಿಗೆಗೆ ಕಾರಣವಾಗಿದೆ. ಪ್ರಾಗಿತಿಹಾಸ ಕಾಲದಿಂದಲೂ ಮಾನವನು ನಿಸರ್ಗದತ್ತವಾಗಿ ಅನೇಕಾ ಅವಶೇಷಗಳನ್ನು ಬಳಸಿ ಬಿಟ್ಟು ಹೋಗಿದ್ದಾನೆ ಇವು ಇಂದಿಗೂ ಆತನ ಕುರುಹುಗಳಾಗಿವೆ. ಇತಿಹಾಸದ ಮೊದಲಿನ ಯುಗವನ್ನು ಪ್ರಾಗಿತಿಹಾಸವೆಂದು ಕರೆದು ಸುಮರು ೨೫ ಲಕ್ಷ ವರ್ಷಗಳಷ್ಟು ವ್ಯಾಪ್ತಿಯ ಚಟುವಟಿಕೆಗಳನ್ನು ಕಾಲಗರ್ಭದಲ್ಲಿ ಅಡಗಿರುವ ಆಯುಧೋಪಕರಣಗಳು ಒತ್ತಿ ಹೇಳುತ್ತಿವೆ.

ಇವುಗಳಿಂದ ಮಾನವನು ಸುದೀರ್ಘವಾದ ಅಲೆಮಾರಿ ಜೀವನದಿಂದ ನಾಗರಿಕತೆಯತ್ತ ಮುನ್ನಡೆದ ಪಥದಲ್ಲಿ ಕೆಲವು ಮೈಲುಗಲ್ಲುಗಳನ್ನು ಗುರುತಿಸಲು ಸಾಧ್ಯವಾಗಿದೆ. ಬಳ್ಳಾರಿ ಪರಿಸರದಲ್ಲಿ ಕಂಡುಬಂದಿರುವ ಪ್ರಾಗಿತಿಹಾಸ ಕಾಲದ ಅವಶೇಷಗಳು ಮತ್ತು ಕೆಲವು ನೆಲೆಗಳಲ್ಲಿ ಕೈಗೊಂಡ ಉತ್ಖನನಗಳಿಂದಾಗಿ ವೈಜ್ಞಾನಿಕ ಅಧ್ಯಯನಕ್ಕೆ ಅವಕಾಶವಾಗಿದೆ. ಪ್ರಾಗಿತಿಹಾಸ ಕಾಲದಿಂದ ಅನೇಕ ಬದಲಾವಣೆಗಳೊಂದಿಗೆ ನಾಗರಿಕತೆಯತ್ತ ಸಾಗಲು ನಿಸರ್ಗದತ್ತವಾದ ಸಂಪತ್ತನ್ನು ಬಳಸಿಕೊಂಡು ನಿತ್ಯಬಳಕೆಯ ಉಪಕರಣಗಳನ್ನು ತಯಾರಿಸುತ್ತ ಬೆಳವಣಿಗೆ ಹೊಂದಿದ್ದನ್ನು ಕಾಣುತ್ತೇವೆ.

## ಭೌಗೋಳಿಕ ಲಕ್ಷಣ

ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆ ೧೪.೩೦°-೧೫.೫೦° ಉತ್ತರ ಅಕ್ಷಾಂಶ ಮತ್ತು ೭೫.೪೦°-೭೭.೧೧° ಪೂರ್ವ ರೇಖಾಂಶಗಳ ನಡುವೆ ಇದೆ. ಈ ಜಿಲ್ಲೆಯ ಪೂರ್ವಕ್ಕೆ ಆಂದ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್, ಪಶ್ಚಿಮಕ್ಕೆ ಕೊಪ್ಪಳ, ನೈಋತ್ಯಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ. ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು, ಬೆಟ್ಟದಿಂದಾವರಿಸಿದೆ. ಸಂಡೂರು, ಕೂಡ್ಲಿಗಿ, ಹರಪನಹಳ್ಳಿ, ಗುಡೇಕೋಡೆ, ಹೊಸಪೇಟೆ, ಕಂಪ್ಲಿ, ದರೋಜಿ, ಕುರುಗೋಡು, ಬಳ್ಳಾರಿ ಮುಂತಾದ ಸ್ಥಳಗಳಲ್ಲಿ ದೊಡ್ಡ ದೊಡ್ಡ ಬೆಟ್ಟಗಳಿವೆ. ಸಂಡೂರು ಕುಮಾರಸ್ವಾಮಿ ಬೆಟ್ಟ (೧.೩೬ ಮೀ), ರಾಮನಮಲೈ ಬೆಟ್ಟ

(೯೯೨ ಮೀ), ಜಂಬುನಾಥಗುಡ್ಡ (೯೦೮ ಮೀ), ಹಾಗೂ ಎತ್ತರದ ಶಿಖರಗಳನ್ನು ಹೊಂದಿವೆ. ಕೂಡ್ಲಿಗಿ ಬೆಟ್ಟಗಳು ಎರಡು ಸಾಲುಗಳಲ್ಲಿವೆ.

ಅವುಗಳಲ್ಲಿ ಒಂದು ಶ್ರೇಣಿ ಆನೆಕಲ್ಲುದುರ್ಗ (೭೨೪ ಮೀ) ಇನ್ನೊಂದು ಜರಿಮಲೆ ಗುಡ್ಡ (೮೩೮ ಮೀ)ಗಳಲ್ಲಿ ಎತ್ತರದ ಶಿಖರಗಳನ್ನು ಹೊಂದಿದೆ. ಗುಡೇಕೋಟೆಯಿಂದ ಈಶಾನ್ಯಕ್ಕೆ ಹರಡಿರುವ ಗುಡೇಕೋಟೆ ಬೆಟ್ಟ ಚಿನ್ನಹಗರಿ ನದಿ ದಾಟಿ ಚಿತ್ರದುರ್ಗ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗುತ್ತದೆ. ಹಡಗಲಿ, ಹರಪನಹಳ್ಳಿ ತಾಲೂಕುಗಳಲ್ಲಿಯ ಮಲ್ಲಪನ ಗುಡ್ಡ (೯೭೮ ಮೀ) ತುಂಗಭದ್ರಾ ನದಿ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ಕಡೆಗೆ ಹಬ್ಬಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ ಕಲ್ಲಪ್ಪನಗುಡ್ಡ ವಾಯವ್ಯದಿಂದ ಈಶಾನ್ಯಕ್ಕೆ ಸಾಗಿದ್ದು, ಇದರಲ್ಲಿ ನರಸಿಂಹದೇವರಗುಡ್ಡ ಸೇರಿದಂತೆ ಉಚ್ಚಂಗಿಯಲ್ಲಿ ಕೊನೆಗೊಳ್ಳುತ್ತದೆ.[೧]

**ನದಿಗಳು**

ಈ ಪ್ರದೇಶದಲ್ಲಿ ಹರಿಯುತ್ತಿರುವ ತುಂಗಭದ್ರ ನದಿಯು ಪಶ್ಚಿಮದ ಹಾವೇರಿ–ಗದಗ ಮತ್ತು ಉತ್ತರದಲ್ಲಿ ಕೊಪ್ಪಳ–ರಾಯಚೂರು ಜಿಲ್ಲೆಗೆ ಈ ನದಿ ಪರಿಣಮಿಸಿದೆ. ತುಂಗಭದ್ರ ನದಿಗೆ ಸೇರುವ ಹಗರಿ, ಚಿಕ್ಕಹಗರಿ ನದಿಗಳು ಪ್ರಾಚೀನ ಕಾಲದಿಂದಲೂ ಕೃಷಿ ಚಟುವಟಿಕೆಗಳಿಗೆ ನೀರನ್ನೊದಗಿಸುತ್ತಿದೆ.

**ತುಂಗಭದ್ರಾ ನದಿ**

ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಈ ತುಂಗಾಭದ್ರ ನದಿಯು ಇದು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟ ಸಾಲಿನ ವರಹ ಪರ್ವತದಲ್ಲಿ ಉಗಮವಾಗಿ ಈ ಎರಡು ನದಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲ್ಲಿ ಒಂದು ತುಂಗಾ ಇನ್ನೊಂದು ಭದ್ರ ಎರಡು ಕಲೆತು ಮುಂದೆ ಸಾಗಿದಾಗ ತುಂಗಭದ್ರ ಎಂದು ಕರೆಯಲಾಗಿದೆ. ಈ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ. ಮಹಾಭಾರತದಲ್ಲಿ ಜಾಹ್ನವಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗುತ್ತದೆ. ಇದರ ನೀರು ಬಲು ರುಚಿಕರವಾಗಿದ್ದು, ಇದಕ್ಕೆ 'ಗಂಗಾಸ್ನಾನ ತುಂಗಾಪಾನ' ಎಂಬ ನಾಣ್ಣುಡಿಯೇ ಬೆಳೆದು ಬಂದಿದೆ. ತುಂಗಾಭದ್ರಾ ನದಿ ಹೂವಿನ ಹಡಗಲಿ ತಾಲೂಕಿನಿಂದ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಪಶ್ಚಿಮದ ಮತ್ತು ಉತ್ತರ ಭಾಗದಲ್ಲಿ ಹರಿದಿರುವ ಇದು ಹರಪನಹಳ್ಳಿ, ಹಡಗಲಿ,

ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರಗುಪ್ಪ ತಾಲೂಕುಗಳನ್ನೊಳಗೊಂಡಂತೆ ೩೨೦ ಕಿ.ಮೀ. ಚಲಿಸಿ ಆಲೂರು ತಾಲೂಕಿನ ಮುಖಾಂತರ ಆಂಧ್ರಪ್ರದೇಶವನ್ನು ಸೇರುತ್ತದೆ.[೨]

**ಉಪನದಿಗಳು**

ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿಗಳಲ್ಲದೆ ಚಿನ್ನ ಹಗರಿಯನ್ನೊಳಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತಿವೆ. ತುಂಗಭದ್ರಾ ನದಿಯಂತೆ ಹಗರಿಯೂ ಚಿಕ್ಕಮಂಗಳೂರು ಜಿಲ್ಲೆಯ ಮುಳ್ಳಯ್ಯನಗಿರಿ ಮತ್ತು ಥಂಗಲಿಯಲ್ಲಿ ಹರಿಯುವ ನೀರನ್ನು ವೇದ ಮತ್ತು ಆವತಿ ಎಂದು ಕರೆಯಲಾಗಿದೆ. ಇವೆರಡೂ ಚಿತ್ರದುರ್ಗ ಜಿಲ್ಲೆಯಲ್ಲಿ ಸೇರಿ ವೇದಾವತಿ ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು (ರೂಪನಗುಡಿಯಲ್ಲಿ) ಪ್ರವೇಶಿಸುತ್ತದೆ. ಈ ಪ್ರದೇಶದ ಶಾಸನಗಳು ಇದನ್ನು 'ಹಗರಿ' 'ಅಗ-ಹರಿ' (ಅಘಹರಿ)(ಪಾಪವನ್ನು ತೊಳೆಯುವ) ಎಂದು ಕರೆದಿವೆ. ಈ ಪ್ರದೇಶದಲ್ಲಿ ೬೨.೮ಕಿ.ಮೀ. ಸಾಗಿ ಸಿರಗುಪ್ಪ ತಾಲೂಕಿನ ಮೂಲಕ ತುಂಗಭದ್ರಾ ನದಿಯನ್ನು ಸೇರುತ್ತದೆ. ವಿಶಾಲವಾಗಿ ಹರಿದಿರುವ ಈ ನದಿ ನೀರನ್ನು ಪ್ರಾಚೀನ ಕಾಲದಿಂದ ತೋಟಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ.[೩]

ತುಂಗಭದ್ರೆಯ ಇನ್ನೊಂದು ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಹರಿಯುತ್ತಿರುವ ಇದು ಒಟ್ಟು ೪೦ ಕಿ.ಮೀ.ಸಾಗಿ ತುಂಗಭದ್ರೆಯನ್ನು ಸೇರುತ್ತದೆ. ಅದೇ ರೀತಿ ಚಿನ್ನಹಗರಿ ನದಿಯು ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮಗೊಂಡು ಕೂಡ್ಲಿಗಿಯ ದಕ್ಷಿಣಕ್ಕೆ ಕಲ್ಲಹಳ್ಳಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತದೆ. ಇದನ್ನು ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಪರಿಣಮಿಸಿರುವ ಇದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ಹಗರಿ ನದಿಗೆ ಬಂದು ಕೂಡುತ್ತದೆ. ಪೆದ್ದವಂಕಾ ಎಂದು ಕರೆಯುವ ಒಂದು ನೀರಿನ ಹರಿವು ತಾಮ್ರ ಪರ್ವತದಲ್ಲಿ ಹುಟ್ಟಿ ಕುಮತಿಯಲ್ಲಿ ಈ ಚಿನ್ನಹಗರಿ ಉಪನದಿಗೆ ಬಂದು ಸೇರುತ್ತದೆ.

ಈ ಮೂರು ಉಪನದಿಗಳೊಂದಿಗೆ ಅಯಾ ಸ್ಥಳಗಳಲ್ಲಿ ಅನೇಕ ಹಳ್ಳಗಳು ಉಗಮವಾಗಿ ತುಂಗಾಭದ್ರಾ ನದಿ ಇಲ್ಲವೆ ಈ ಉಪನದಿಗಳನ್ನು ಕೂಡಿಕೊಳ್ಳುತ್ತವೆ. ಹಗರನೂರು ಹಳ್ಳ, ಹಂಪಸಾಗರ ಹಳ್ಳ, ನಾರಿಹಳ್ಳ, ಹರಿವನಮಹಳ್ಳ, ಮಾದಿಹಳ್ಳ, ತೆಲಗಿಹಳ್ಳ, ಇಟ್ಟಗಿಹಳ್ಳ, ಮಾರಹಳ್ಳ (ಹರಪನಹಳ್ಳಿ) ತಿಪ್ಪಾಪುರಹಳ್ಳ, ಹಿರೇಹಳ್ಳ (ಹಡಗಲಿ) ಮೊದಲಾದವು ಪ್ರಮುಖವಾದವು.[೪]

**ಭೂರಚನೆ**

ಈ ಪ್ರದೇಶವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್ ಶಿಲೆಗಳಿಂದ ಕಂಗೊಳಿಸುತ್ತಿದೆ. ಸಾಮಾನ್ಯವಾಗಿ ಕ್ರಿಸ್ಟಸ್ ಲೈನ್‌ಸಿಸ್ಟ್ಸ್(ಸ್ಫಟಿಕದಂತಹ ಪದರು ಶಿಲೆ) ಎಪಿಡಿಯೋರಾಯಿಟ್ಸ ಗ್ರಾನೈಟ್ (ಜಂಬಿಟ್ಟಿಗೆ) ಮತ್ತು ಲೇಟರ್ ಗ್ರಾನೈಟ್ಸ್ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೇಕ್ ಶಿಲೆ ಕಂಡುಬರುತ್ತದೆ. ಕ್ರಿಸ್ಟಲೈನ್‌ಸಿಸ್ಟ್ಸ್, ಎಪಿಡಿಯೋರಾಯಿಟ್ಸ ಗ್ರಾನೈಟ್ ಧಾರವಾಡ ಪ್ರದೇಶದಲ್ಲಿರುವಂತೆ ಹಳೆ ಮಾದರಿಯೆಂದು ಗುರುತಿಸಲಾಗಿದೆ.

**ಖನಿಜ ಸಂಪತ್ತು**

ಖನಿಜಗಳಲ್ಲಿ ಅತಿ ಮುಖ್ಯವಾದುದೆಂದರೆ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದ ಇದರ ಉಪಯೋಗದಿಂದ ಮಾನವನು ನಗರಿಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಇಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳ ವಿವರ ಇಂತಿದೆ.[೫]

ಕಬ್ಬಿಣದ ಅದಿರು – ಸಂಡೂರು, ನಂದಿಹಳ್ಳಿ, ಹೊಸಪೇಟೆ ಸುತ್ತಮುತ್ತ.

ಮ್ಯಾಂಗನೀಸ್ – ದೇವಗಿರಿ, ಸುಬ್ರಾಯನಳ್ಳಿ, ರಾಯಘಡ.

ತಾಮ್ರ – ಹರಪನಹಳ್ಳಿ, ಚಿನ್ನಾಪುರ, ರಾಮಘಡ, ತಾಮ್ರಘಡ.

ಸತು – ಮೆಟ್ರಿ

ಮ್ಯಾಗ್ನಸೈಟ್ – ತೋರಣಗಲ್ಲು

ಬಂಗಾರ – ಶೃಂಗಮರಡಿ, ಬೆಟಗೇರಿ, ತಾರಾನಗರ, ಕಂಚೂರು.

ಈಪ್ಸಮ್ – ತಾಳೂರು, ಉತ್ತನೂರು, ಹಿರೇಹಡಗಲಿ, ಚಿನ್ನಹಳ್ಳಿ

ಜೇಡಿಮಣ್ಣು – ಹಲಗಾವಲ, ಸುಬ್ರಾಯನಹಳ್ಳಿ, ಯರನಹಳ್ಳಿ, ತುಂಬರಗುದ್ದಿ.

ಸುಣ್ಣದಕಲ್ಲು – ತೋರಣಗಲ್ಲು ಮೆಟ್ರಿ, ಉಬ್ಬಲಗಂಡಿ, ದೇವಲಾಪುರ ಮಲ್ಲಪನಗುಡ್ಡ.

ಬಳಪದ ಕಲ್ಲು – ಅರಸಾಪುರ, ನೀಲಗುಂದ

ಹಳದಿ ಓಕರ್ – ತುಮರಿ, ರಾಯಘಡ, ಬಲದಗುಡ್ಡ.

ರೆಡ್ ಓಕರ್ – ಜಾನಿಕುಂಟೆ, ಜಂಬುನಾಥಪುರ, ವ್ಯಾಸನಕೆರೆ, ಕರಡಿಕೊಳ್ಳ

ಬೆಣಚುಕಲ್ಲು – ನಾಗಲಾಪುರ, ರಾಜಾಪುರ, ಗಾದಿಗನೂರು, ಅಂಕಮನಾಳ.

ಮಿನರಲ್ ವಾಟರ್ – ಹರಿಶಂಕರ, ಜೋಗಿಕೊಳ್ಳ

ವಜ್ರ – ದೇವಗೊಂಡನಹಳ್ಳಿ.

ಬೆಸಾಲ್ಟ್ – ತಿಮ್ಮಾಪುರ.

**ಮಣ್ಣು**

ಈ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಫಲವತ್ತಾದ ಜೇಡಿಮಣ್ಣು ಹರಡಿದೆ. ಮರುಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ತುಂಗಾಭದ್ರ–ಹಗರಿ ನದಿ ಪ್ರದೇಶಗಳಲ್ಲಿ ಕಂಡುಬರುತ್ತದೆ. ಕಪ್ಪು ಜೇಡಿಮಣ್ಣು ಹಡಗಲಿ ತಾಲೂಕು ಪ್ರದೇಶದಲ್ಲಿದೆ.

**ಅರಣ್ಯ**

ಈ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೯,೫೬,೨೨೦ ಹೆಕ್ಟೇರುಗಳು ಅದರಲ್ಲಿ ಅರಣ್ಯ ಪ್ರದೇಶ ೧,೯೯,೨೪೭ ಹೆಕ್ಟೇರುಗಳಿದೆ. ಇಲ್ಲಿಯ ಒಟ್ಟು ತಾಲೂಕುಗಳಲ್ಲಿ ಶೇ ೪೦ರಷ್ಟು ಅರಣ್ಯ ಬೆಳೆಸಲಾಗಿದೆ. ಇವುಗಳಲ್ಲಿ ಹೆಚ್ಚಿನ ಪ್ರಮಾಣ ಅಂದರೆ ೧,೦೪,೯೭೯ ಹೆಕ್ಟೇರು ಅರಣ್ಯ ಪ್ರದೇಶ ಹೊಸಪೇಟೆ, ಕೂಡ್ಲಿಗಿ, ಸಂಡೂರು ತಾಲೂಕುಗಳಲ್ಲಿದೆ.[೬]

**ಮುಖ್ಯ ಬೆಳೆಗಳು**

ಬಳ್ಳಾರಿ ಜಿಲ್ಲೆಯಾದ್ಯಂತ ಉತ್ತಮ ಬೆಳೆಗಳನ್ನ ಬೆಳೆಯುತ್ತಾರೆ. ತುಂಗಾಭದ್ರಾ ಮತ್ತು ಅದರ ಉಪನದಿಗಳ ನೀರನ್ನು ಬಳಸಿಕೊಂಡು ಮತ್ತು ಮಳೆಯಾಶ್ರಯಿತ ನೀರಿನಿಂದ ಭತ್ತ, ಗೋಧಿ, ಜೋಳ, ಗೋವಿನ ಜೋಳ, ರಾಗಿ, ತೊಗರಿ, ಕಡಲೆ ಮೊದಲಾದ ಧಾನ್ಯಗಳು ಹಾಗೂ ಕಬ್ಬು, ಹತ್ತಿ, ಬಾಳೆ ಮೊದಲಾದ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ.

**ಪ್ರಾಣಿ– ಪಕ್ಷಿ**

ಈ ಪ್ರದೇಶದ ಕಾಡು ಹಾಗೂ ಬೆಟ್ಟಗುಡ್ಡಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ನರಿ, ತೋಳ ಮೊದಲಾದ ಕಾಡು ಪ್ರಾಣಿಗಳು ಹಾಗೂ ಆನೇಕ ಬಗೆಯ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ತುಂಗಾಭದ್ರಾನದಿಯಲ್ಲಿ ಮೊಸಳೆಗಳಿವೆ.

**ವಾಯುಗುಣ**

ಉಷ್ಣಾಂಶವು ಸರಾಸರಿ ೧೬.೭. ಸೆ. ದಿಂದ ೪೨.೯ ಸೆ. ವರೆಗೆ ಇರುತ್ತದೆ. ಕೆಲವು ಸಲ ಇದು ೪೫ ರಿಂದ ೪೯ ಸೆ..ವರೆಗೆ ಏರುತ್ತದೆ. ಮಳೆಯ ವಾರ್ಷಿಕ ಸರಾಸರಿ ೫೭೪.೯ ಮಿ.ಮೀ.ಇರುತ್ತದೆ.

**ಪ್ರಾಗಿತಿಹಾಸ**

ಫಲವತ್ತಾದ ಭೂಮಿ, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲಗಳಿಂದ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಾಸಸ್ಥಾನವಾಗುವುದಕ್ಕೆ ಕಾರಣವಾಯಿತು.

ಸುಮಾರು ೫ ಲಕ್ಷ ವರ್ಷಗಳ ಹಿಂದಿನಿಂದ ಆದಿ ಇತಿಹಾಸ ಕಾಲದವರೆಗಿನ ಬೆಳವಣಿಗೆ ಕರ್ನಾಟಕ ಅದರ ನೆರೆಯ ಮಹಾರಾಷ್ಟ್ರ, ಆಂದ್ರಪ್ರದೇಶ, ತಮಿಳುನಾಡುಗಳಲ್ಲಿಯ ಕ್ಷೇತ್ರ ಶೋಧನೆ ಮತ್ತು ಉತ್ಖನನಗಳಿಂದ ಅತಿ ಪ್ರಾಚೀನ ೭ ಘಟ್ಟಗಳು ತಿಳಿದುಬಂದಿದೆ.

೧. ಆದಿ ಶಿಲಾಯುಗ (೫ ಲಕ್ಷ ಅಥವಾ ಅದಕ್ಕೂ ಮುಂಚೆ)

೨. ಮಧ್ಯ ಹಳೆಯ ಶಿಲಾಯುಗ (ಕ್ರಿ.ಪೂ.೭೦,೦೦೦–೩೦,೦೦೦)

೩. ಅಂತ್ಯ ಹಳೆ ಶಿಲಾಯುಗ (ಕ್ರಿ.ಪೂ. ೪೦,೦೦೦–೧೦,೦೦೦)

೪. ಸೂಕ್ಷ್ಮ ಶಿಲಾಯುಗ (ಕ್ರಿ.ಪೂ. ೭,೦೦೦–೩,೦೦೦)

೫. ನವ ಶಿಲಾಯುಗ (ಕ್ರಿ.ಪೂ. ೨,೨೦೦–೮೦೦)

೬. ಕಬ್ಬಿಣ ಶಿಲಾಯುಗ (ಕ್ರಿ.ಪೂ. ೧೨೦೦–೨೦೦)

ಈ ಪ್ರದೇಶದಲ್ಲಿ ಕೈಗೊಂಡ ಕ್ಷೇತ್ರಕಾರ್ಯ ಮತ್ತು ಉತ್ಖನನಗಳಿಂದ ಕಂಡುಬಂದಿರುವ ಪ್ರಾಗಿತಿಹಾಸ ಕಾಲದ ಅವಶೇಷಗಳಿಂದ ವಿವಿಧ ಶಿಲಾಯುಗದ ನೆಲೆಗಳನ್ನು ಈ ರೀತಿಯಾಗಿ ಗುರುತಿಸಬಹುದು.[೭]

**೧. ಆದಿ ಹಳೆ ಶಿಲಾಯುಗ ಮತ್ತು ನೆಲೆಗಳು :**

ಸುಮಾರು ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳಷ್ಟು ಹಳೆಯದೆಂದು ಗುರುತಿಸಲಾದ ಆದಿ ಹಳೆಯ ಶಿಲಾಯುಗದ ಅವಶೇಷಗಳು ಭಾರತದಾದ್ಯಂತ ಅನೇಕ ಸ್ಥಳಗಳಲ್ಲಿ ಕಂಡು ಬರುತ್ತವೆ. ಕರ್ನಾಟಕದಲ್ಲಿ ಅನಗವಾಡಿ ಮತ್ತು ಹುಣಸಗಿ ಈ ಹಂತಕ್ಕೆ ಸೇರಿದ ಪ್ರಮುಖ ಸ್ಥಳಗಳು. ಹುಣಸಗಿಯಲ್ಲಿ ತಾತ್ಕಾಲಿಕವಾಗಿ ಅಡ್ಡ ಮರೆ ಮಾಡಿಕೊಂಡಿದ್ದ ಗುರುತು ಮತ್ತು ತನ್ನ ದೈನಂದಿನ ಜೀವನಕ್ಕೆ ಬೇಕಾದ ಕಲ್ಲಿನ ಉಪಕರಣಗಳನ್ನು ಮಾಡಲು ಉಪಯೋಗಿಸಿದ ಅಡಿಗಲ್ಲು ಉತ್ಖನನದಲ್ಲಿ ಶೋಧವಾಗಿವೆ. ಅಲ್ಲದೆ ಬಲು ದೂರದಿಂದ ಬುದ್ಧಿ ಪೂರ್ವಕವಾಗಿ ತಂದ ಕೆಮ್ಮಣ್ಣು ಗಟ್ಟಿಗಳು ದೊರೆತಿವೆ. ಇದನ್ನು ಬಣ್ಣಹಾಕುವುದಕ್ಕೆ ಅಥವಾ ಬರೆಯುವುದಕ್ಕೆ ಬಳಸಿಕೊಂಡಿರಬಹುದು.

ಈ ಪ್ರದೇಶದ ಬಳ್ಳಾರಿ, ಬೆಳಗಲ್ಲು, ನಿಟ್ಟೂರು, ದರೋಜಿ, ಜೋಗ ಮೊದಲಾದ ಸ್ಥಳಗಳು ಆದಿ ಹಳೆ ಶಿಲಾಯುಗಕ್ಕೆ ಸೇರಿದವು. ಈ ಎಲ್ಲಾ ಸ್ಥಳಗಳಲ್ಲಿ ಮಾನವನು ಬಳಸಿ ಬಿಟ್ಟುಹೋದ ಶಿಲಾ ಉಪಕರಣಗಳು ಕಂಡುಬಂದಿವೆ. ಕಮಲಾಪುರದಲ್ಲಿ ಹೆರೆಗತ್ತಿ, ಮಚ್ಚುಗತ್ತಿಗಳನ್ನು ಡಾಲರೈಟ್ ಶಿಲೆಯಲ್ಲಿ ತಯಾರಿಸಲಾಗಿದೆ. ನಿಟ್ಟೂರಿನಲ್ಲಿ ಎರಡು ಪ್ರಕಾರದ ಆಯುಧಗಳು ಕಂಡುಬಂದಿವೆ. ಅವು ದಕ್ಷಿಣ ಭಾರತದ ಕೈಗೊಡಲಿ ಮತ್ತು ಹೆರೆಯುವ ಉಪಕರಣಗಳ ವರ್ಗಕ್ಕೆ ಸೇರಿದವು. ಈ ಉಪಕರಣಗಳೊಂದಿಗೆ ಅಪರೂಪಕ್ಕೆ ಬಾಸ್ ನೊಮ್ಯಾಡಿಕಸ್ ಎಂಬ ಪ್ರಾಣಿಯ ಪಳಿಯುಳಿಕೆ ಕೂಡಾ ದೊರೆತಿವೆ.

ಈ ಹಂತದ ಮಾನವನ ದೈನಂದಿನ ಕಾರ್ಯ ಚಟುವಟಿಕೆಯನ್ನು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆ ಸಂಸ್ಕೃತಿಯೆಂದು ಕರೆಯಲಾಗಿದೆ. ಅಲ್ಲದೆ ಈ ಉಪಕರಣಗಳನ್ನು ಯಾವ ಉದ್ದೇಶಕ್ಕಾಗಿ ಬಳಸಲಾಗುತ್ತಿದೆಂಬುವುದು ನಿಗೂಢವಾಗಿಯೇ ಇದೆ. ಅವುಗಳ ಆಕಾರವನ್ನು ಗಮನಿಸಿ ಪ್ರಾಣಿ ಬೇಟೆ ಅವುಗಳ ಚರ್ಮವನ್ನು ಬೇರ್ಪಡಿಸುವುದು, ಮಾಂಸವನ್ನು ತುಂಡು ಮಾಡುವುದು, ಗೆಡ್ಡೆಗೆಣಸು, ಕಂಟಿಗಳನ್ನು ಅಗೆದು ತೆಗೆಯುವುದಕ್ಕೆ ಮುಂತಾದ ಉದ್ದೇಶಗಳಿಗಾಗಿ ಬಳಸಿರಬೇಕೆಂದು ತರ್ಕಿಸಲಾಗಿದೆ. ಆದಿ ಶಿಲಾಯುಗದಲ್ಲಿ ಮಧ್ಯೆಹಳೆಶಿಲಾಯುಗ ಮತ್ತು ಅಂತ್ಯ ಹಳೆ ಶಿಲಾಯುಗಗಳನ್ನು ಆಯುಧಗಳ ರಚನೆ ಮತ್ತು ಬದಲಾವಣೆಗೆ ಅನುಗುಣವಾಗಿ ಎರಡು ವರ್ಗಗಳನ್ನು ಗುರುತಿಸಲಾಗಿದೆ. ಈ ಎರಡು ಹಂತಗಳಿಗೆ ಸಂಬಂಧಿಸಿದ ಉಪಕರಣಗಳನ್ನು ಈ ಪ್ರದೇಶದಲ್ಲಿ ಹೆಚ್ಚಿನ ಶೋಧನೆಯಿಂದ ಕಂಡುಕೊಳ್ಳಬೇಕಾಗಿದೆ.

**ಸ್ಥಳಗಳು**

ಬಾದನಹಟ್ಟಿಗುಡ್ಡ, ಬಳ್ಳಾರಿ, ಬೆಳಗಲ್ಲು (ಬಳ್ಳಾರಿ ತಾ.), ಕಮಲಾಪುರ, ಗಾದಿಗನೂರು (ಹೊಸಪೇಟೆ ತಾ.) ನಿಟ್ಟೂರು (ಶಿರಗುಪ್ಪ ತಾ.), ಕುರೆಕುಪ್ಪ, ಜೋಗ, ಮಲ್ಲಾಪುರ (ಸಂಡೂರು ತಾ.) ಕುರುವತ್ತಿ (ಹಡಗಲಿ ತಾ.)

**ಮಧ್ಯ ಶಿಲಾಯುಗ**

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಇಲ್ಲವೆ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಭಾರತಾದ್ಯಂತ ಅನೇಕ ಕಡೆಗಳಲ್ಲಿ ಈ ಹಂತದ ಉಪಕರಣಗಳು ಮತ್ತು ಗವಿವರ್ಣ ಚಿತ್ರಗಳು ಕಂಡುಬಂದಿವೆ. ಇಲ್ಲಿಯ ಕುಡುತಿನಿ, ಸಂಗನಕಲ್ಲು, ಕುರೆಕುಪ್ಪೆ, ತೋರಣಗಲ್ಲು, ಮಲ್ಲಾಪುರ, ತಿಮ್ಮಲಾಪುರ, ಭೂವನಹಳ್ಳಿ ಮುಂತಾದ

ಸ್ಥಳಗಳಲ್ಲಿ ಈ ಹಂತದ ನೆಲೆಗಳಿವೆ. ೧೯೬೫ರಲ್ಲಿ ಪುಣೆ ಡೆಕ್ಕನ್ ಕಾಲೇಜಿನ ವಿದ್ವಾಂಸರು ಸಂಗನಕಲ್ಲು ನೆಲೆಯಲ್ಲಿ ಉತ್ಖನನ ಕೈಗೊಂಡರು. ಇದರಿಂದ ಉಪಕರಣಗಳನ್ನು ತಯಾರಿಸುತ್ತಿದ್ದ ಕಾರ್ಯಾಗಾರವು ಬೆಳಕಿಗೆ ಬಂತು.

ಅಲ್ಲದೆ ಅವರು ಬಳ್ಳಾರಿ– ಮೊಕ ರಸ್ತೆಯಲ್ಲಿ ಬಂಗಲೆ ತೋಟದ ಹತ್ತಿರ ನಡೆಸಿದ ಉತ್ಖನನದಲ್ಲಿ ಚಟ್, ಕ್ವಾರ್ಜ್, ವೈಟ್ ಕ್ವಾರ್ಜ್ ಶಿಲೆಯಲ್ಲಿ ತಯಾರಿಸಿದ ಉಪಕರಣಗಳು ಮತ್ತು ಇವುಗಳ ತಯಾರಿಕೆಗಾಗಿ ಬಳಸಿದ ಶಿಲಾಗಟ್ಟಿಗಳು ದೊರೆತಿವೆ. ಭುವನಹಳ್ಳಿಯಲ್ಲಿ ವಿವಿಧ ಮಾದರಿಯ ಉಪಕರಣಗಳನ್ನು ಚರ್ಟ್ ಶಿಲೆಯಲ್ಲಿ ತಯಾರಿಸಲಾಗಿದೆ. ಮಾನವ ಜೀವನದ ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಹಂತದ ಪಾತ್ರ ಗಮನಾರ್ಹವಾದುದು. ಈ ಅವಧಿಯಲ್ಲಿ ಬೇಟೆಯಾಡುವುದು, ಮೀನು ಹಿಡಿಯುವುದು.

ಆಹಾರ ಸಂಗ್ರಹಣೆ ಜೀವನದ ವ್ಯವಸ್ಥೆಯಾಗಿದ್ದಿತು. ಇದರಲ್ಲಿ ಮುಖ್ಯ ಬೆಳವಣಿಗೆಯೆಂದರೆ ಬೇಸಾಯ ಮಾಡುವುದು. ಇದು ನಂತರದ ನೂತನ ಶಿಲಾಯುಗದಲ್ಲಿ ಅಭಿವೃದ್ಧಿಯಾಯಿತು. ಈ ಕಾಲದ ಆಹಾರೋತ್ಪಾದನೆಯ ಬೆಳವಣಿಗೆಯಿಂದಾಗಿ ಸ್ಥಿತ್ಯಂತರ ಹಂತವೆಂದು ಗುರುತಿಸಲಾಗಿದೆ. ಬಳಕೆಯಲ್ಲಿದ್ದ ಉಪಕರಣಗಳು ಗಾತ್ರದಲ್ಲಿ ಅತಿಸಣ್ಣ. ಆದ್ದರಿಂದ ಸೂಕ್ಷ್ಮ ಶಿಲಾಸಂಸ್ಕೃತಿಯೆಂದು ಕರೆಯಲಾಯಿತು. ಅವುಗಳಲ್ಲಿ ಸಮಾನಾಂತರ ಅಂಚುಗಳುಳ್ಳ ಅಲಗುಗಳು, ಚಿಕ್ಕ ಅಲಗುಗಳು, ಬಾಗಿದ ಅಲಗುಗಳು, ಮೊನೆಗಳು, ಸಣ್ಣ ಬೈರಿಗೆಗಳು, ಆಹಾರ ಕತ್ತರಿಸುವ ಚಿಕ್ಕ ಮಚ್ಚುಗಳು ಮೊದಲಾದವು ಪ್ರಮುಖವಾದವು.

**ನೂತನ ಶಿಲಾಯುಗ**

ಈ ಸಂಸ್ಕೃತಿಯ ಹಂತವನ್ನು ಗುರುತಿಸುವಾಗ ಉಜ್ಜಿ ನಯಗೊಳಿಸಿದ ಮೇಲ್ಮೈಯುಳ್ಳ ಕೊಡಲಿಗಳು ಹಾಗೂ ಬೂದುವರ್ಣದ ಮಡಿಕೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಈ ಉಪಕರಣಗಳು ಪ್ರಾಚೀನ ಶಿಲಾಯುಧಗಳಂತೆ ಬುರುಕಾಗಿಲ್ಲ ಅಲ್ಲದೆ ಆಗಲೇ ಆರಂಭವಾಗಿದ್ದ ಪಶುಪಾಲನೆ ಮತ್ತು ಕೃಷಿ ಅಭಿವೃದ್ಧಿ ಹೊಂದಿದವು. ಬೂದುವರ್ಣದ ಪಾತ್ರೆಗಳ ತಯಾರಿಕೆ, ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣದೊಂದಿಗೆ ಒಂದು ರೀತಿಯ ಪರಸ್ಪರ ಅವಲಂಬನೆಯ ಆಧಾರದ ಮೇಲೆ ಒಟ್ಟಾಗಿ ವಾಸಿಸುವ ಜನರು ತಮ್ಮ ದೈನಂದಿನ ಕಾರ್ಯ ವಿಭಜನೆ ಮಾಡಿಕೊಳ್ಳುತ್ತ ಜೀವಿಸುತಿದ್ದರು. ಇದನ್ನು ಆರಂಭಿಕ ಸಂಘಟಿತ ಸಮಾಜವೆಂದು ಕರೆಯಲಾಗಿದೆ.

ಇಲ್ಲಿಯ ಕುಡುತಿನಿ, ಕಪಗಲ್ಲು, ಸಂಗನಕಲ್ಲು, ಕತ್ತಳಿ, ತೆಕ್ಕಲಕೋಟೆ, ನಿಟ್ಟೂರು, ದರೋಜಿ, ಕುರುಗೋಡು, ಕಾಕುಬಾಳು, ತಿಮ್ಮಾಲಾಪುರ, ಬೆಳಗಟ್ಟ ಮೊದಲಾದ ನೆಲೆಗಳಲ್ಲಿ ಉಜ್ಜಿ ನಯಗೊಳಿಸಿದ ಶಿಲಾ ಉಪಕರಣಗಳು ಕಂಡುಬಂದಿವೆ. ಸಂಗನಕಲ್ಲು, ಕಾಕುಬಾಳುಗಳಲ್ಲಿ ಇವುಗಳೊಂದಿಗೆ ಬೂದುವರ್ಣದ ಮಡಿಕೆಗಳು, ಬೆಳ್ಳಿಗಟ್ಟಿಯಲ್ಲಿ ಅರೆಯುವ ಕಲ್ಲು, ಹೆರೆಚೆಕ್ಕೆ, ಶಂಖದ ಆಭರಣಗಳು ದೊರೆತಿವೆ. ಈ ಪ್ರದೇಶಕ್ಕೆ ಹೊಂದಿಕೊಂಡಿರುವ ಗಂಗಾವತಿ ತಾಲೂಕಿನಲ್ಲಿ ಅನೇಕ ಇಂಥ ನೆಲೆಗಳಿವೆ. ಅಲ್ಲದೆ ಬ್ರಹ್ಮಗಿರಿಯಲ್ಲಿ ಉತ್ಖನನ ಮಾಡಿದ ಮಾರ್ಟಿಮರ್ ವೀಲರ್ ಅವರು ನವಶಿಲಾಯುಗದಿಂದ ಮೊದಲ್ಗೊಂಡು ಒಟ್ಟು ನಾಲ್ಕು ಹಂತಗಳನ್ನು ಗುರುತಿಸಿದ್ದಾರೆ. ಬ್ರಹ್ಮಗಿರಿ, ಮಸ್ಕಿ, ಸಂಗನಕಲ್ಲು, ತೆಕ್ಕಲಕೋಟೆ ಇವು ವಾಸ್ತವ್ಯದ ನೆಲೆಗಳಾಗಿದ್ದವು. ಉತ್ತರ ಮಧ್ಯಭಾರತದಲ್ಲಿ ಸಾವಳದಾ ಸಂಸ್ಕೃತಿಯನ್ನು ಗುರುತಿಸಿದಂತೆ ದಕ್ಷಿಣ ಭಾರತದಲ್ಲಿ ಕಂಡುಬಂದಿರುವ ಉಪಕರಣಗಳನ್ನು ಮಸ್ಕಿ ಸಂಸ್ಕೃತಿಗೆ ಹೋಲಿಸುವುದುಂಟು. ಸಂಗನಕಲ್ಲಿನ ವಸತಿ ನೆಲೆ, ಕಪ್ಪಗಲ್ಲು ಬೂದಿದಿಬ್ಬ ಮತ್ತು ತೆಕ್ಕಲಕೋಟೆಗಳಲ್ಲಿ ನಡೆದ ಉತ್ಖನನಗಳಿಂದ ಅನೇಕ ಉಪಕರಣಗಳೊಂದಿಗೆ ವಾಸಕ್ಕಾಗಿ ನಿರ್ಮಿಸಿದ್ದ ಮನೆಗಳ ಚಿತ್ರಣ ದೊರೆತಿವೆ.[೮]

ಇಂಥ ಮನೆಗಳನ್ನು ಸಂಗನಕಲ್ಲು, ತೆಕ್ಕಲಕೋಟೆಗಳಂತೆ, ಮಹಾರಾಷ್ಟ್ರದ ಇನಾಮಗಾಂವಲ್ಲಿ ಗುರುತಿಸಲಾಗಿದೆ. ಇವುಗಳ ಆಕಾರ ಮತ್ತು ಪ್ರಮಾಣವನ್ನು ಗಮನಿಸಲಾಗಿ ಸುಮಾರು ೨ ರಿಂದ ೫-೬ ಹೆಕ್ಟೇರಿನವರೆಗೆ ವಾಸ್ತವ್ಯದ ನೆಲೆಗಳು ಇರುತ್ತಿದ್ದವು. ಇವರು ನಿರ್ಮಿಸುತ್ತಿದ್ದ ಗುಡಿಸಲುಗಳ ವಿನ್ಯಾಸ ವರ್ತುಳ ಇಲ್ಲವೆ ಅಪರೂಪವಾಗಿ ಆಯುತಾಕಾರದಲ್ಲಿದ್ದು, ಅದರ ಒಂದು ಭಾಗ ಹಿಗ್ಗಿದ ಅರ್ಧದಷ್ಟು ವಿನ್ಯಾಸದಲ್ಲಿರುತ್ತವೆ.

ನೆಲದ ಅಂಚಿನಲ್ಲಿ ಕಂಬಗಳು, ಅವುಗಳಿಗೆ ಬಿದಿರಿನ ಅಥವಾ ಬಳ್ಳಿಗಳಿಂದ ಹೆಣೆದ ತಡಿಕೆಗಳನ್ನು ಕಟ್ಟಲಾಗುತ್ತಿತ್ತು. ತಟ್ಟಿಗೋಡೆಯ ಎರಡೂ ಬದಿಗೆ ಕಲಸು ಮಣ್ಣು ಮೆತ್ತಿ ಬುಡದಲ್ಲಿ ಕಲ್ಲುಗಳನ್ನು ಇಡಲಾಗುತ್ತಿತ್ತು. ನೆಲಕ್ಕೆ ಚಿಪ್ಪು ಕಲ್ಲುಗಳನ್ನು ಹಾಕಿ ಮೇಲೆ ಕೆಂಪುಮಣ್ಣಿನಿಂದ ಗಟ್ಟಿಗೊಳಿಸಲಾಗುತ್ತಿತ್ತು. ಈ ಪರಿಸರದ ಸಂಗನಕಲ್ಲು, ಕುರುಗೋಡು, ಕಾಕುಬಾಳು ನೆಲೆಗಳಲ್ಲಿಯ ಕ್ಷೇತ್ರಕಾರ್ಯದಲ್ಲಿ ಅನೇಕ ಉಪಕರಣಗಳನ್ನು ಸಂಗ್ರಹಿಸಲಾಯಿತು. ಸಂಗ್ರಹಿತ ಅವಶೇಷಗಳಲ್ಲಿ ಒಂದು ಅಪರೂಪದ ಕೈಗೊಡಲಿ ಸಂಗನಕಲ್ಲು ನೆಲೆಯಲ್ಲಿ ಕಂಡುಬಂದಿದೆ.

ಕಪ್ಪು ಬಿಳಿ-ಮಿಶ್ರಿತ ಶಿಲೆಯಲ್ಲಿ ನಿರ್ಮಿಸಿದ ಇದರ ಉದ್ದ ೩೪ ಸೆಂ.ಮೀ.ದಲ್ಲಿದೆ. ಇಂಥ ದೊಡ್ಡ ಆಯುಧವನ್ನು ಮಾನವನು ಗಿಡಗಳನ್ನು ಕಡಿಯಲು ಇಲ್ಲವೆ ಬಲಿಷ್ಠ ಪ್ರಾಣಿಗಳನ್ನು ಬೇಟೆಯಾಡಲು ಬಳಸಿಕೊಂಡಿರಬೇಕು. ಸಂಗನಕಲ್ಲು-ಕಪ್ಪುಗಲ್ಲು ಬೆಟ್ಟಗಳು ಹತ್ತಿರದಲ್ಲಿಯೇ ಇವೆ.

ಕಪ್ಪುಗಲ್ಲು ಬೆಟ್ಟದಲ್ಲಿ ಚಕ್ಕೆ ಎಬ್ಬಿಸಿ ನಿರ್ಮಾಣ ಹಂತದಲ್ಲಿರುವ ಒರಟಾದ ಆಯುಧಗಳು ಹೇರಳವಾಗಿವೆ. ಸಂಗನಕಲ್ಲು ಬೆಟ್ಟದಲ್ಲಿ ಉಜ್ಜಿ ನಯಗೊಳಿಸಿದ ಶಿಲಾಯುಧಗಳನ್ನು ತಯಾರಿಸುವ ಬೃಹತ್ ಪ್ರಮಾಣದ ಕಾರ್ಯಾಗಾರ ಇತ್ತೆಂದು ತಿಳಿಯುತ್ತದೆ. ದೊಡ್ಡ ದೊಡ್ಡ ಬಂಡೆಗಳು ಮತ್ತು ಗುಹೆಗಳಿಂದ ಕೂಡಿದ ಸಂಗನಕಲ್ಲು ಬೆಟ್ಟವನ್ನು ವಾಸ್ತವ್ಯಕ್ಕಾಗಿ ಮಾಡಿಕೊಂಡಂತೆ ತೋರುತ್ತದೆ.

**ಚಾರಿತ್ರಿಕ ಹಿನ್ನಲೆ**

ಬಯಕಾರ ರಾಮಪ್ಪನು ೧೬ನೆ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದ. ಇವನು ಹಲವಾರು ಆಗ್ರಹಾರಗಳು, ಅನೇಕ ದೇಗುಲಗಳು, ಅಧಿಕ ಸಂಖ್ಯೆಯ ಬಾವಿ ಮತ್ತು ದೊಡ್ಡದಾದ ಕೆರೆಗಳನ್ನು ಕಟ್ಟಿಸಿದ್ದಾನೆ. ಇವನು ನಿರ್ಮಿಸಿದ ಕೆರೆಗಳು ಇಂದಿಗೂ ಸಾವಿರಾರು ಜನರಿಗೆ ಜಲಾಶ್ರಯವನ್ನು ನೀಡಿವೆ. ಇವನು ರಾಮಾಮಾತ್ಯನೆಂದೂ ಪ್ರಖ್ಯಾತನಾಗಿದ್ದಾನೆ. ಇವನು ಸಂಗೀತಗಾರ, ವಾಗ್ಗೇಯಕಾರ, ವಾಸ್ತುಕಾರ, ದಕ್ಷ ಆಡಳಿತಗಾರ ಹಾಗೂ ಸರ್ವತೋಮುಖ ಪ್ರತಿಭಾವಂತ. ಬಯಕಾರ ರಾಮಪ್ಪನು ವಿಜಯನಗರ ಸಾಮ್ರಾಜ್ಯದ ಕಿರಿಯ ಹುದ್ದೆಗಳಲ್ಲಿ ದಕ್ಷತೆಯಿಂದ ಆಡಳಿತವನ್ನು ನಡೆಸಿ ಅಂತಿಮವಾಗಿ ಸೂಕ್ಷ್ಮ ಹಾಗೂ ಪ್ರಕ್ಷುಬ್ಧ ದುರ್ಗವಾದ ಕೊಂಡವೀಡುವಿನ ದುರ್ಗಾಧಿಪತಿಯಾಗಿ ನೇಮಕವಾದನು. ಇದು ಅಸಾಧಾರಣ ದಕ್ಷತೆಯ ಪ್ರತೀಕವಾಗಿದೆ. ಇವನ ವ್ಯಕ್ತಿತ್ವದ ವಿವಿಧ ಮುಖಗಳನ್ನು ಇಲ್ಲಿ ಅರಿಯೋಣ,

ಬಯಕಾರ ರಾಮಪ್ಪನು ಪಾದರಿಕುಪ್ಪಂ ಗ್ರಾಮದ ಅಧಿಕಾರಸ್ಥ ಹಾಗೂ ವಿದ್ವಾಂಸರ ಸುಪ್ರಸಿದ್ಧ ಮನೆತನದಲ್ಲಿ ಜನಿಸಿದವನು. ಇದು ಇಂದು ಚೆಂಗಲ್‌ಪಟ್ಟು ಜಿಲ್ಲೆಯ ಪೊನ್ನೇರಿ ತಾಲೂಕಿನಲ್ಲಿದೆ. ಪರಾಶರಗೋತ್ರದ, ಆಪ್ತಸ್ತಂಭ ಸೂತ್ರದ ಮತ್ತು ಯಜುಸ್ ಶಾಖೆಯ ಹಿರಿಯ ತಿಮ್ಮರಸಯ್ಯ ಮತ್ತು ಹಿರಿಯ ಲಕುಲೀಶಮ್ಮ ಇವನ ತಂದೆ ತಾಯಿಯರು. ಶಾಸನಗಳಲ್ಲಿ ತಿಳಿಸಿರುವಂತೆ ಸಿಂಗಯ್ಯ ಎಂಬುವನು ಇವನ ವಂಶದ ಮೂಲ ಪುರುಷ. ಇವನ ಮಗ ಭಾವಯ್ಯ. ಭಾವಯ್ಯನಿಗೆ ರಾಮಮಂತ್ರಿ ಎಂಬ ಮಗನಿದ್ದನು. ರಾಮ ಮಂತ್ರಿಗೆ ತೆಲುಗಮ್ಮಳೆಂಬ ಧರ್ಮಪತ್ನಿಯಲ್ಲಿ ಪೆದತಿಮ್ಮಯ್ಯ ತಿಮ್ಮಮಂತ್ರಿ, ಶೂರ, ಭಾಸ್ಕರ ಅಥವಾ ರಾಮಯ್ಯ ಭಾಸ್ಕರ ಮತ್ತು ಭಾವಯ್ಯ ಎಂಬ ಐವರು ಗಂಡು ಮಕ್ಕಳು ಹಾಗೂ ಚೆನ್ನಮಾಂಬ ಎಂಬ ಏಕಮಾತ್ರ ಮಗಳಿದ್ದಳು. ಈಕೆಯನ್ನು ಕೊಂಡವೀಡು ಸೀಮೆಯ ಸಂತಲೂರು ಗ್ರಾಮದ ಪ್ರತಾಪಯಲ್ಲನಿಗೆ ಮದುವೆ ಮಾಡಿಕೊಡಲಾಯಿತು.

ರಾಮಮಂತ್ರಿಯ ಮಕ್ಕಳಲ್ಲಿ ಹಿರಿಯವನಾದ ಪೆದತಿಮ್ಮಯ್ಯನೇ ಬಯಕಾರ ರಾಮಪ್ಪನ ತಂದೆ. ಪೆದತಿಮ್ಮಯ್ಯನನ್ನು ತಿಮ್ಮಾಮಾತ್ಯನೆಂದೂ ಕರೆಯಲಾಗಿದೆ. ಇವನನ್ನು ಗೌರವಾರ್ಥವಾಗಿ ಅಮಾತ್ಯನೆಂದು ಕರೆಯಲಾಗಿದೆಯೇ ವಿನಾ, ಇವನೇನು ಮಂತ್ರಿಯಾಗಿರಲಿಲ್ಲ. ಇವನು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ರಾಯಸನೆಂಬ ಅಧಿಕಾರಿಯಾಗಿದ್ದ. ಬಯಕಾರ ರಾಮಪ್ಪ ತನ್ನ ಸಂಗೀತ ಕೃತಿಯಲ್ಲಿ ತೋಡರಮಲ್ಲ ಕುಟುಂಬಕ್ಕೆ ಸೇರಿದವನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಶಾರ್ಙ್ಗದೇವನು ಬರೆದ ಸಂಗೀತ ರತ್ನಾಕರ ಗ್ರಂಥಕ್ಕೆ ಭಾಷ್ಯವನ್ನು ರಚಿಸಿದ ಕಲ್ಲಪ್ಪದೇಶಿಕ ಅಥವಾ ಕಲ್ಲಿನಾಥನು ಇವನ ತಾಯಿಯ ತಂದೆ. ಇವನ ಚಿಕ್ಕಪ್ಪಂದಿರಾದ ರಾಮಯ್ಯ ಭಾಸ್ಕರ ಮತ್ತು ಭಾವಯ್ಯರು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ಅತ್ಯಂತ ಪ್ರಮುಖವಾದ ಹಾಗೂ ಪ್ರಭಾವಿ ಹುದ್ದೆಗಳನ್ನು ಅಲಂಕರಿಸಿದ್ದರು.

ರಾಮಯ್ಯ ಭಾಸ್ಕರನು ಬಾಚರಸನೆಂದೂ ಹೆಸರಾಗಿದ್ದಾನೆ. ಇವನನ್ನು ಕೊಂಡವೀಡುದುರ್ಗದ ದಣ್ಣಾಯಕನಾಗಿ ನೇಮಿಸಲಾಗಿತ್ತು. ಈ ನೇಮಕಕ್ಕೆ ಕೃಷ್ಣದೇವರಾಯನೇ ಕಾರಣವಿರಬೇಕು. ಕೊಂಡವೀಡು ದುರ್ಗವು ಆಯಕಟ್ಟಿನ ಸ್ಥಳದಲ್ಲಿದ್ದರಿಂದ ಇದನ್ನು ಆಕ್ರಮಿಸಲು ಕಳಿಂಗದ ಗಜಪತಿಗಳು, ದಖನ್ನಿನ ಸುಲ್ತಾನರು ಮತ್ತು ವಿಜಯನಗರದ ಅರಸರಲ್ಲಿ ತೀವ್ರ ಸ್ಪರ್ಧೆಯಿತ್ತು. ಗೆದ್ದ ಈ ದುರ್ಗವನ್ನು ಉಳಿಸಿಕೊಳ್ಳಲು, ಗೆದ್ದಷ್ಟೇ ಪ್ರಯಾಸಪಡಬೇಕಿತ್ತು.[೮]

ಈ ದುರ್ಗದ ನಿರ್ವಹಣೆಗೆ ದಕ್ಷನೂ, ಸಚ್ಚಾರಿತ್ರನೂ ಆದ ವ್ಯಕ್ತಿಯ ಅವಶ್ಯವಿತ್ತು. ಆಯಕಟ್ಟಿನ ಹಾಗೂ ಸೂಕ್ಷ್ಮ ಪರಿಸ್ಥಿತಿಯ ದುರ್ಗಗಳ ಸಂರಕ್ಷಣೆಗೆ ಅಸೂಯೆ, ದುರಾಸೆ ಮತ್ತು ವಂಚನೆಗಳಿಂದ ಮುಕ್ತರಾದ ಸನ್ನಡತೆಯ ಬ್ರಾಹ್ಮಣ ನಾಯಕರನ್ನು ಕೃಷ್ಣದೇವರಾಯನು ನೇಮಿಸಿದನೆಂದು ರಾಯವಾಚಕಂ ಗ್ರಂಥವು ತಿಳಿಸುತ್ತದೆ. ಅವರಲ್ಲಿ ಭಾಸ್ಕರನೂ ಒಬ್ಬ. ಭಾಸ್ಕರನ ನೇಮಕದ ಹಿಂದೆ ಕೃಷ್ಣದೇವರಾಯನು ಕಂಡ ದೂರದರ್ಶಿತ್ವ ಮುಂದೊಂದು ದಿವಸ ಸಾಕಾರವಾದುದುಂಟು. ರಾಯನ ಕಡು ವಿರೋಧಿಗಳಾಗಿದ್ದ ಸುಮಾರು ಎಪ್ಪತ್ತೆರಡು ಮಂದಿ ರೆಡ್ಡಿನಾಯಕರನ್ನು ಭಾಸ್ಕರನು ಕೊಂಡವೀಡುವಿನಲ್ಲಿ ನೂತನವಾಗಿ ನಿರ್ಮಿಸಿದ ಗೋಪಿನಾಥ ದೇಗುಲಕ್ಕೆ ಆಹ್ವಾನಿಸಿ ಕೊಂದನಂತೆ.

ಇದರಲ್ಲಿ ಉತ್ಪ್ರೇಕ್ಷೆ ಇರುವುದಾದರೂ, ಮಧ್ಯಯುಗದಲ್ಲಿ ಇಂತಹ ಘಟನೆಗಳು ಸಾಮಾನ್ಯವಾಗಿದ್ದವು. ಅಷ್ಟು ಸಂಖ್ಯೆಯ ರೆಡ್ಡಿನಾಯಕರಿಲ್ಲದಿದ್ದರೂ ಅನೇಕರು ಮೃತರಾಗಿರುವುದು ಒಪ್ಪಬೇಕಾದದ್ದೆ. ಅದೇನೆ ಇರಲಿ ರಾಯನ ಶತ್ರುಗಳು ನಾಶವಾಗಿ, ಅವನ ಅಧಿಕಾರ ಕೊಂಡವೀಡುವಿನಲ್ಲಿ ಪ್ರಬಲವಾಗಲು ಸಾಧ್ಯವಾಯಿತು. ರಾಮಯ್ಯ ಭಾಸ್ಕರನೊಂದಿಗೆ ಬಯಕಾರ

ರಾಮಪ್ಪನ ಸಂಬಂಧದ ಎಳೆಗಳು ಪ್ರಬಲವಾಗಿದ್ದವು. ಇವನು ತನ್ನನ್ನು ಬಾಚರಸನ ಮಗನೆಂದು ಒಂದು ಶಾಸನದಲ್ಲಿ ಹೇಳಿಕೊಂಡಿರುವುದು ಈ ವಾತ್ಸಲ್ಯ ಸಂಬಂಧದ ದ್ಯೋತಕವಾಗಿದೆ.

ಚಿಕ್ಕಪ್ಪ ಅಥವಾ ದೊಡ್ಡಪ್ಪನನ್ನು ತಂದೆಯೆಂದು ಹೇಳಿಕೊಳ್ಳುವುದು ಭಾರತೀಯ ಸಂಪ್ರದಾಯದಲ್ಲಿ ಸಾಮಾನ್ಯ ಸಂಗತಿಯೇ. ಇವನು ತನ್ನ ಚಿಕ್ಕಪ್ಪ ಬಾಚರಸ, ಚಿಕ್ಕಮ್ಮ ಅಮ್ಮಾಜಮ್ಮ ಮತ್ತು ಅವರ ಮಗ ಕೃಷ್ಣಪ್ಪ ಈ ಮೂವರ ಹೆಸರಿನಲ್ಲಿ ಶಿವಾಲಯವನ್ನು ಕಟ್ಟಿಸಿದ. ಬಯಕಾರ ತನ್ನ ಚಿಕ್ಕಪ್ಪನೊಂದಿಗೆ ಇದ್ದ ಅಮರ ವಾತ್ಸಲ್ಯದ ನೆನಪಾಗಿ ಈ ದೇಗುಲ ಉಳಿದಿದೆ. ಬಯಕಾರ ರಾಮಪ್ಪನ ಪತ್ನಿ ವೀರಮ್ಮ ಇವನಿಗೆ ಲಿಂಗಾಲಯ್ಯ ಮತ್ತು ಆಕಪ್ಪ ಎಂಬ ಇಬ್ಬರು ಗಂಡುಮಕ್ಕಳು ಅಚ್ಯುತಮ್ಮ ಮತ್ತು ಕಾಮಾಂಬಿಕಾ ಎಂಬಿಬ್ಬರು ಹೆಣ್ಣು ಮಕ್ಕಳು ಇದ್ದರು. ಇವನ ವಂಶಾವಳಿಯನ್ನು ಈ ಕೆಳಕಂಡಂತೆ ರಚಿಸಿರಬಹುದು.

**ಬಯಕಾರ ರಾಮಪ್ಪನ ವಂಶಾವಳಿ**



**ದಕ್ಷ ಆಡಳಿತಗಾರ**

ಬಯಕಾರ ರಾಮಪ್ಪ ಅಸಾಮಾನ್ಯ ಹಾಗೂ ದಕ್ಷ ಆಡಳಿತಗಾರ. ವಂಶದ ಘನತೆಯಿಂದಲೂ ಮನೆತನದ ಹಿರಿಯರ ಸ್ಥಾನಮಾನದಿಂದಲೂ ಇವನು ಉನ್ನತ ಹುದ್ದೆಯನ್ನು ಗಳಿಸಲಿಲ್ಲ. ವೈಯಕ್ತಿಕ ಸಾಧನೆಗಳ ಮೂಲಕ ಮುಂದೆ ಬಂದ ಸ್ವಯಂನಿರ್ಮಿತ ವ್ಯಕ್ತಿತ್ವ ಇವನದು. ಮೊದಲಿಗೆ ಮಗಣೀಕಾರ, ಪಾರುಪತ್ಯಗಾರ ಮುಂತಾದ ಕಿರಿಯ ಹುದ್ದೆಗಳಲ್ಲಿ ದುಡಿದು ಅಪಾರವಾದ ಅನುಭವವನ್ನು ಗಳಿಸಿದ. ಈ ಹಂತಗಳಲ್ಲಿ ರಾಮಪ್ಪನು ಅಪ್ರತೀಮ ದಕ್ಷತೆಯನ್ನು ಪ್ರದರ್ಶಿಸಿ ವಿಜಯನಗರದ ಚಕ್ರವರ್ತಿಗಳ ಮೆಚ್ಚುಗೆಯನ್ನು ಸಂಪಾದಿಸಿದ. ಇವನಿಗೆ 'ಸಾಮ್ರಾಜ್ಯದುರಂಧರ' ಎಂಬ ಬಿರುದು ದೊರೆಯಿತು. ಇಂದಿನ ಮೈಸೂರು ನಗರದ ಸುತ್ತಲಿನ ಹದಿನಾಡು ಪ್ರದೇಶದ ನಾಯಕನಾಗಿ ಸೇವೆ ಸಲ್ಲಿಸಿದ್ದನು. ಆನಂತರ ತುಮಕೂರು ಜಿಲ್ಲೆಯ ಬೂದಿಹಾಳು ಮತ್ತು ಹೊನ್ನವಳ್ಳಿ ಸೀಮೆಗಳ ಮಾಗಣಿಕಾರನಾಗಿ ಸಾಮ್ರಾಜ್ಯದ ಆಡಳಿತ ನಡೆಸಿದ. ಇಲ್ಲಿ ಸಮರ್ಥ ಅಧಿಕಾರಿಯಾಗಿ ಸೇವೆ ಸಲ್ಲಿಸಿದ ಸಮಯದಲ್ಲಿ ವಿಜಯನಗರದ ಚಕ್ರವರ್ತಿಗಳ ಗಮನವನ್ನು ಸೆಳೆದಿರಬೇಕು.[೯]

ರಾಮಾಮಾತ್ಯನು ತನ್ನ ಸ್ವಂತ ಸಾಮರ್ಥ್ಯ ಮತ್ತು ಪ್ರತಿಭೆಯಿಂದ ಪ್ರಾಂತಾಧಿಕಾರಿಯ ಉನ್ನತ ಹುದ್ದೆಯನ್ನು ಗಳಿಸಿದ. ಇವನು ಚಿಕ್ಕಪ್ಪ ರಾಮಯ್ಯ ಭಾಸ್ಕರನ ನಿವೃತ್ತಿ ಅಥವಾ ಸಾವಿನ ನಂತರ ಅರಸ ಅಚ್ಯುತರಾಯನು ಬಯಕಾರ ರಾಮಪ್ಪನನ್ನು ಭಾಸ್ಕರನ ನಿವೃತ್ತಿ ಅಥವಾ ಸಾವಿನ ನಂತರ ಅರಸ ಅಚ್ಯುತರಾಯನು ಬಯಕಾರ ರಾಮಪ್ಪನನ್ನು ಕೊಂಡುವೀಡು ದುರ್ಗದ ಅಧಿಪತಿಯನ್ನಾಗಿ ಕ್ರಿ.ಶ.೧೫೪೩ರಲ್ಲಿ ನೇಮಿಸಿದ. ಇದಕ್ಕೆ ರಾಮಯ್ಯ ಭಾಸ್ಕರನ ನೆರವು ದೊರೆತಿರಬಹುದು. ರಾಮಪ್ಪನು ತನ್ನ ಚಿಕ್ಕಪ್ಪನನ್ನು ತಂದೆಯೆಂದು ಕರೆದುಕೊಂಡಿರುವುದು ಹಾಗೂ ಅವನು ಅವನ ಪತ್ನಿ ಮತ್ತು ಅವನ ಮಗನ ಹೆಸರಿನಲ್ಲಿ ಗುಡಿಗಳನ್ನು ಕಟ್ಟಿಸಿರುವುದರಿಂದ ಈ ಊಹೆ ಸಕಾಲಿಕ ಎನಿಸುತ್ತದೆ.

ರಾಮಾಮಾತ್ಯನು ತನ್ನನ್ನು ಜೇಲೂರಿ ಸಿಂಹಾಸನಾಧಿಪತಿ ಎಂದು ಕರೆದುಕೊಂಡು ಅರಸನೊಂದಿಗೆ ಸಮಾನ ಸ್ಥಾನವನ್ನು ಘೋಷಿಸಿಕೊಂಡದ್ದುಂಟು. ಇವನಿಗೆ ಸಂಬಂಧಿಸಿದ ಶಾಸನಗಳ ಅಧ್ಯಯನದಿಂದ ಕೊಂಡುವೀಡು ದುರ್ಗಾಧಿಪತ್ಯವು ಇವನ ವಂಶದ ಎರಡು ತಲೆಮಾರಿನವರೆಗೆ ಅಧೀನದಲ್ಲಿರುವುದು ಕಂಡುಬರುತ್ತದೆ. ಮೊದಲೇ ಗಮನಿಸಿದಂತೆ ಕೊಂಡುವೀಡು ದುರ್ಗವು ರಾಜಕೀಯವಾಗಿ ಜಟಿಲ ಕಾರಸ್ಥಾನವಾಗಿದ್ದರಿಂದ ದಖನ್ ಸುಲ್ತಾನರೂ ಒಳಗೊಂಡಂತೆ ಅನೇಕ ಅರಸರನ್ನು ಆಕರ್ಷಿಸಿತ್ತು. ಹಾಗೂ ಅದು ಸಮಸ್ಯೆಗಳ ತಾಣವಾಗಿತ್ತು.

ಸಂಗಮ ಅರಸರ ಕಾಲದಿಂದ ಸಾಮ್ರಾಜ್ಯದ ಕಾಲದ ಉದ್ದಕ್ಕೂ ಕೊಂಡವೀಡು ದುರ್ಗವು ರಾಜಕೀಯ ಮತ್ತು ಲಷ್ಕರಿ ಪ್ರಾಮುಖ್ಯವನ್ನು ಗಳಿಸಿತ್ತೆನ್ನುವುದನ್ನು ಗಮನಿಸಬಹುದು.

ಈ ದುರ್ಗದ ಆಡಳಿತವನ್ನು ನಿರ್ವಹಿಸಲು ದಕ್ಷನೂ, ದೃಢಚಿತ್ತದವನೂ, ಚತುರನೂ ಹಾಗೂ ವಿಶ್ವಾಸಪಾತ್ರನೂ ಆದ ವ್ಯಕ್ತಿಯ ಅಗತ್ಯವಿತ್ತು. ಈ ಅಗತ್ಯಗಳನ್ನು ಬಯಕಾರ ರಾಮಪ್ಪನು ಪೂರೈಸಿದ. ಅಚ್ಯುತರಾಯನ ಸಾವಿನ ನಂತರವೂ ವಿಜಯನಗರದ ಸರ್ವಾಧಿಕಾರಿ ಅಳಿಯ ರಾಮರಾಯನ ಕಾಲದಲ್ಲಿ ಇವನು ಅಧಿಕಾರದಲ್ಲಿ ಮುಂದುವರೆದ. ಅಳಿಯ ರಾಮರಾಯನ ಸೋದರ ವೆಂಕಟಾದ್ರಿಯು ಇವನ ಪ್ರೀತಿಯ ಮಿತ್ರನಾಗಿರುವುದು ಇವನು ರಚಿಸಿದ ಸಂಗೀತ ಗ್ರಂಥದಿಂದ ತಿಳಿಯುತ್ತದೆ. ಇವನು ವೆಂಕಟಾದ್ರಿಯ ಮೂಲಕ ರಾಮರಾಯನ ವಿಶ್ವಾಸವನ್ನು ಗಳಿಸಿದ ಹಾಗೂ ತನ್ನ ಸಂಗೀತ ಗ್ರಂಥವನ್ನು ಅವನಿಗೆ ಅರ್ಪಿಸಿದ. ಬ್ರಾಹ್ಮಣ ವಿದ್ವಾಂಸರು ಆಡಳಿತ ರಂಗದಲ್ಲಿ ಮತ್ತು ಅರಸರ ಅಸ್ಥಾನದಲ್ಲಿ ಉನ್ನತಾಧಿಕಾರಿಗಳಿಂದ ಅಧಿಕಾರ ನಿರ್ವಹಿಸುತ್ತಿರುವುದು ಸಾಮಾನ್ಯ ಸಂಗತಿ. ಇದಕ್ಕೆ ವಿಜಯನಗರ ಸಾಮ್ರಾಜ್ಯ ಹೊರತಾದುದಲ್ಲ. ಸಂಗಮ ಅರಸರ ಕಾಲದಿಂದಲೂ ಈ ವ್ಯವಸ್ಥೆಯನ್ನು ಕಾಣುತ್ತೆವೆ. ವಿಜಯನಗರದ ಆಡಳಿತದಲ್ಲಿ ಮಾಧವ ಮಂತ್ರಿ, ಲಕ್ಷ್ಮೀಧರ ಮುಂತಾದ ನೂರಾರು ಬ್ರಾಹ್ಮಣ ಮಂತ್ರಿಗಳನ್ನು ಹೆಸರಿಸಬಹುದು.

ಬ್ರಾಹ್ಮಣಧಿಕಾರಿಗಳನ್ನು ಅಳಿಯ ರಾಮರಾಯನು ಆಡಳಿತದಿಂದ ದೂರವಿಟ್ಟಿದ್ದು ಈ ಕಾಲದ ವಿಶಿಷ್ಟ ಅಂಶ. ಈ ಸಮಯದಲೂ ಅಧಿಕಾರದಲ್ಲಿ ಮುಂದುವರೆದ ಇಬ್ಬರು ಬ್ರಾಹ್ಮಣ ಉನ್ನತಾಧಿಕಾರಿಗಳಲ್ಲಿ ಇವನೂ ಒಬ್ಬ ಎಂಬುದು ಗಮನಾರ್ಹವಾದ ಸಂಗತಿ. ಕೊಂಡವೀಡುವಿನಂತಹ ಮಹತ್ವದ ದುರ್ಗದ ದಣ್ಣಾಯಕನಾಗಿ ಅಧಿಕಾರದಲ್ಲಿ ಮುಂದುವರೆಯಬೇಕಾದರೆ ಇವನ ವ್ಯಕ್ತಿತ್ವದ ಹಿರಿಮೆಗಳ ಅರಿವು ಆಗುತ್ತದೆ. ಮತ್ತೊಬ್ಬ ಬ್ರಾಹ್ಮಣ ಅಧಿಕಾರಿಯೇ ರಾಮಭಟ್ಟಯ್ಯ. ಅಳಿಯ ರಾಮರಾಯನು ಇವರ ಬದಲು ಕ್ಷತ್ರೀಯರು ಮತ್ತು ತೆಲುಗು ಚೋಳರನ್ನು ಅಧಿಕಾರದಲ್ಲಿ ತುಂಬಿದ್ದು ಅನ್ಯ ಸಂಗತಿ.

**ವಿದ್ವಾಂಸನಾಗಿ ಸೇವೆ**

ಬಯಗಾರ ರಾಮಪ್ಪನು ಆಗಮ ಮತ್ತು ಸಂಗೀತಗಳೆರಡರಲ್ಲೂ ಘನಪಂಡಿತನಾಗಿದ್ದ. ಪ್ರಾರಂಭದಿಂದಲೂ ಇವನ ಶಾಸನಗಳು ಇವನನ್ನು ವಾಗ್ಗೇಯಕಾರನೆಂದು ಕರೆದಿವೆ. ಇವನ ನಾಮವಿಶೇಷಣವೇ ಆ ಅರ್ಥವನ್ನು ಕೊಡುತ್ತದೆ. ಬಯಗಾರ ಎಂಬುದು ಉಭಯಕಾರದ ಸಂಕ್ಷಿಪ್ತ ಅಥವಾ ರೂಢಿಪದ. ಉಭಯಕಾರ ಎಂಬುದು ವಾಗ್ಗೇಯಕಾರ ಮತ್ತು ಸಂಗೀತಗಾರ ಎಂಬ

ಪ್ರಕಾರಗಳನ್ನು ಸೂಚಿಸುತ್ತದೆ. ಇವನು ಉದ್ದಾಮ ಸಂಗೀತ ಕರತಿಗಳ ರಚನಕಾರನಾಗಿದ್ದರಿಂದ ವಿಜಯನಗರದ ಅರಸರು ಇವನಿಗೆ ಅಭಿನವ ಭರತಾಚಾರ್ಯ ಎಂಬ ಬಿರುದುನ್ನು ನೀಡಿದ್ದರು. ಕರ್ನಾಟಕ ಸಂಗೀತವನ್ನು ಕುರಿತು ಇಂದಿಗೂ ಅವಶ್ಯವಾಗಿ ಅಧ್ಯಯನ ಮಾಡಲೇಬೇಕಾದ "ಸ್ವರ ಮೇಳ ಕಲಾನಿಧಿ" ಎಂಬ ಸಂಗೀತ ಗ್ರಂಥವನ್ನು ಬಯಗಾರ ರಾಮಪ್ಪನು ಸಂಸ್ಕೃತದಲ್ಲಿ ರಚಿಸಿದ.

ಇವನ ಸಂಗೀತದ ರಹಸ್ಯಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ಇವನ ತಾತ ಕಲ್ಲಿನಾಥ ಸಂಗೀತದ ಪ್ರಕಾಂಡ ಪಂಡಿತನಾಗಿದ್ದ. ಕಲ್ಲಿನಾಥನು ಶಾರ್ಙ್ಗದೇವನು 'ಸಂಗೀತ ರತ್ನಾಕರ' ಗ್ರಂಥಕ್ಕೆ ಭಾಷ್ಯವನ್ನು ಬರೆದಿದ್ದಾನೆ. ಶಾರ್ಙ್ಗದೇವನು ದೇವಗಿರಿಯ ಸೇವುಣ ಅರಸ ಸಿಂಘಣನ ಆಸ್ಥಾನದಲ್ಲಿದ್ದ ಮಹಾನ್ ಸಂಗೀತ ವಿದ್ವಾಂಸ. ತನ್ನ ತಾತ ಕಲ್ಲಿನಾಥನಿಂದ ಪಡೆದಿದ್ದ ಸಂಗೀತ ಪರಂಪರೆಯ ವಿದ್ವಾತ್ತು ಬಯಕಾರ ರಾಮಪ್ಪನ ಧಮನಿಗಳಲ್ಲಿ ಹರಿಯುತ್ತಿತ್ತು. ಅಳಿಯ ರಾಮರಾಯನ ಅಪೇಕ್ಷಯ ಮೇರೆಗೆ ರಾಮಾಮಾತ್ಯನು 'ಸ್ವರ ಮೇಳಕಲಾನಿಧಿ' ಎಂಬ ಸಂಗೀತ ಗ್ರಂಥವನ್ನು ರಚಿಸಿದ. ಇವನು ಈ ಗ್ರಂಥದಲ್ಲಿ ಅಂದಿನ ಸಂಗೀತದ ಸಿದ್ಧಾಂತಗಳು ಮತ್ತು ರೂಢಿಯಲ್ಲಿದ್ದ ಹಾಡುಗಾರಿಕೆಯ ನಡುವೆ ಹೊಂದಾಣಿಕೆಯನ್ನು ರೂಪಿಸಿದನು. ಈ ಗ್ರಂಥವನ್ನು ಕ್ರಿ.ಶ. ೧೫೫೦ ರ ೨೧ ರಂದು ಪೂರ್ಣಗೊಳಿಸಿದೆನೆಂದು ಇವನು ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ.[೧೦]

ಬಯಕಾರ ರಾಮಪ್ಪನು ತನ್ನ ಬಿಡುವಿಲ್ಲದ ದೈನಂದಿನ ಆಡಳಿತದ ನಡುವೆಯೂ ಅಧ್ಯಯನ ಮತ್ತು ಅಧ್ಯಾಪನವನ್ನು ಕೈಗೊಂಡಿದ್ದ. ಸಂಗೀತದಂತೆ ವೇದಾ ಆಗಮಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ಇವನು ತನ್ನ ಹತ್ತಿರದ ಬಂಧುವಾದ ಊಂಟ ಲಕ್ಷ್ಮಣಭಟರ ಧರ್ಮಪತ್ನಿ ಗೋಪಮ್ಮನಿಗೆ ಸಂಗೀತ ಮತ್ತು ಆಗಮಗಳನ್ನು ಬೋಧಿಸಿದ್ದ.

**ಲೋಕೋಪಕಾರಿಯಾಗಿ ರಾಮಪ್ಪನ ಸಾಧನೆಗಳು**

ಬಯಕಾರ ರಾಮಪ್ಪನು ಈ ಕಾಲದ ಖ್ಯಾತಿವೆತ್ತ ಲೋಕೋಪಕಾರಿ. ಇವನು ಮಾಡಿದ ಜನ ಪರ ಕಾಮಗಾರಿಗಳು ನಾಲ್ಕೂವರೆ ಶತಮಾನಗಳ ನಂತರವೂ ಜನತೆಗೆ ನೆರವಾಗುತ್ತವೆ. ಇವನ ಕುಟುಂಬದ ಹಿರಿಯ ಸದಸ್ಯರು ಉದಾರವಾಗಿ ಧರ್ಮಕಾರ್ಯವನ್ನು ಕೈಗೊಂಡಿದ್ದವರು ಹಾಗೂ ಜನಹಿತಕ್ಕಾಗಿ ದುಡಿದವರು. ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ಬಾಚರಸಯ್ಯನ ಜೊತೆಗೂಡಿ ಚಕ್ರವರ್ತಿ ಅಚ್ಯುತನ ಮಗ ಚಿಕ್ಕವೆಂಕಟಾದ್ರಿಗೆ ಶುಭವಾಗಲೆಂದು ತಿರುಮಲ ದೇವಾಸ್ಥಾನಕ್ಕೆ ದತ್ತಿಯನ್ನು ಬಿಟ್ಟಿದ್ದನು. ಈ ದತ್ತಿಯೊಂದಿಗೆ ಇವನ ಜನಹಿತ ಕಾರ್ಯಗಳು ವ್ಯಾಪಕವಾಗಿ

ಪ್ರಾರಂಭವಾದವು. ಇವನು ಅಚ್ಯುತರಾಯನ ಪಾರುಪತ್ಯಗಾರನಾಗಿದ್ದಾಗ ಹಾಗೂ ಬೂದಿಹಾಳು ಸೀಮೆಯ ಮಾಗಣೀಕಾರನಾಗಿದ್ದಾಗ, ಜನತೆಯಿಂದ ಬರಬೇಕಾದ ಮದುವೆ ಸುಂಕ ಮತ್ತು ಇತರ ಸುಂಕಗಳನ್ನು ಶಿವರಾತ್ರಿಯ ಶುಭಮಹೋತ್ಸವದಂದು (ಕ್ರಿ.ಶ. ೧೫೩೫ ರಲ್ಲಿ) ಮನ್ನ ಮಾಡಿದ. ಇದು ತನ್ನೊಡೆಯ ಅಚ್ಯುತರಾಯನಿಗೆ ಶುಭವಾಗಲೆಂದು ಕೈಗೊಂಡ ಕೈಂಕರ್ಯ. ಇವನು ಇಂದಿನ ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿನ ಹೊನ್ನವಳ್ಳಿ ಸೀಮೆಯ ಆಡಳಿತಗಾರನಾಗಿದ್ದಾಗ, ಕ್ರಿ.ಶ. ೧೫೩೫ ರಲ್ಲಿ ಚಿಕ್ಕಗಂಡಸಿಯಲ್ಲಿ ಅಗ್ರಹಾರವನ್ನು ಸ್ಥಾಪಿಸಿದ. ಅಲ್ಲಿ ಹಲವಾರು ಬ್ರಾಹ್ಮಣರಿಗೆ ಅನೇಕ ಹಳ್ಳಿಗಳನ್ನು ಹಂಪಿಯ ವಿರೂಪಾಕ್ಷ ಮತ್ತು ವಿಠ್ಠಲ ದೇವರ ಸನ್ನಿಧಿಯಲ್ಲಿ ದಾನವಾಗಿ ನೀಡಿದ.

ಕೊಂಡುವೀಡು ಪ್ರಾಂತಾಧಿಕಾರಿಯಾಗಿ ಬಯಕಾರ ರಾಮಪ್ಪನು ನೇಮಕವಾದ ಮೇಲೆ ರಾಮಪ್ಪನು ಮಹತ್ತರವಾದ ಧರ್ಮಕಾರ್ಯಗಳನ್ನು ಅಧಿಕ ಪ್ರಮಾಣದಲ್ಲಿ ಕೈಗೊಂಡ. ಉನ್ನತಾಧಿಕಾರವನ್ನು ಪಡೆದ ಸಂತೋಷವೋ ಅಥವಾ ದೈವಕಾರುಣ್ಯವನ್ನು ಸಂಪಾದಿಸಿದನೆಂಬ ಭಾವನೆಯೋ, ಬಯಕಾರ ರಾಮಪ್ಪನು ಹಲವಾರು ಅಗ್ರಹಾರಗಳನ್ನು ಕಟ್ಟಿಸಿದ, ದೇವಾಲಯಗಳನ್ನು ನಿರ್ಮಿಸಿದ, ಕೆರೆ ಮತ್ತು ಬಾವಿಗಳನ್ನು ತೋಡಿಸಿದ. ಇದು ಕನ್ನಡ ನಾಡಿನ ಅರಸರು ಮತ್ತು ಜನತೆಯ ಪರಂಪರೆ ಇವನ ಕಾಲಕ್ಕೂ ಹಿಂದಿನ ಶಾಸನಗಳನ್ನು ಅಧ್ಯಯನ ಮಾಡಿದರೆ ಅವು ಅಗ್ರಹಾರಗಳ ನಿರ್ಮಾಣದ ಬಗ್ಗೆ ಮಾಹಿತಿಯನ್ನು ಕೊಡುತ್ತವೆ. ಅವುಗಳು ತಿಳಿಸುವಂತೆ ಅಗ್ರಹಾರವು ವೃಕ್ಷರಾಜರುಗಳಿಂದ ಕೂಡಿರಬೇಕು.

ಅವುಗಳಿಗೆ ನೀರುಣಿಸುವ ಕಾಲುವೆಗಳಿರಬೇಕು. ಅವುಗಳ ಸುತ್ತಲೂ ಸಮುದ್ರಗಳಿಂತಿರುವ ಕೆರೆಗಳಿರಬೇಕು. ಈ ಪ್ರಾಚೀನ ಪರಂಪರೆಗೆ ಅನುಗುಣವಾಗಿ ಬಯಕಾರ ರಾಮಪ್ಪನು ಕರ್ನಾಟಕ ಮತ್ತು ಆಂಧ್ರದ ವಿವಿಧ ಸ್ಥಳಗಳಲ್ಲಿ ಅಗ್ರಹಾರಗಳನ್ನು ಕಟ್ಟಿಸಿದನು. ಕ್ಷಲ್ಲಕರಡ್ಡುಹಳ್ಳಿ ಮತ್ತು ಚಿಗೋಡು ಗ್ರಾಮಗಳನ್ನು ಒಂದುಗೂಡಿಸಿ, ಶ್ರೀತಿಮ್ಮಾಪುರ ಅಗ್ರಹಾರವೆಂದು ಕರೆದ. ಇದನ್ನು ಚಿನತಿಮ್ಮಾಪುರವೆಂದೂ ಕರೆಯಲಾಗಿದೆ. ತನ್ನ ತಂದೆಗೆ ಪುಣ್ಯಪ್ರಾಪ್ತವಾಗಲೆಂದು ಈ ಸೇವೆಯನ್ನು ಕೈಗೊಂಡ.

ಈ ಪ್ರದೇಶದಲ್ಲೇ ಇರುವ ಮಂಗಿಮಾವಿನಹಳ್ಳಿಯನ್ನು ಪೆದತಿಮ್ಮಾಪುರವೆಂಬ ಹೆಸರಿನಲ್ಲಿ ಮತ್ತೊಂದು ಅಗ್ರಹಾರವನ್ನಾಗಿ ಪರಿವರ್ತಿಸಿದ. ಅಲ್ಲಿ ತನ್ನ ತಂದೆ ಪೆದತಿಮ್ಮಯ್ಯ ಮತ್ತು ತಾಯಿ ಹಿರಿಯ ಲಕ್ಕುಲೀಶಮ್ಮನಿಗೆ ಪುಣ್ಯವಾಗಲೆಂದು ಕ್ರಿ.ಶ.೧೫೪೯ರಲ್ಲಿ ಇವನು ಸುಂದರವಾದ ಗೋಪಿನಾಥ ದೇವಾಲಯವನ್ನು ಕಟ್ಟಿಸಿದ.

ಅದೇ ವರ್ಷ ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ಬಾಚರಸಯ್ಯ, ಚಿಕ್ಕಮ್ಮ ಅಮ್ಮಾಜಮ್ಮ ಮತ್ತು ಅವರ ಮಗ ಕೃಷ್ಣಪ್ಪನಿಗೆ ಪುಣ್ಯವಾಗಲೆಂದು ತಿಮ್ಮಲಾಪುರದಲ್ಲಿ ತ್ರಿಕೂಟಾಚಲ ವಿನ್ಯಾಸದ ಶಿವಾಲಯವನ್ನು ನಿರ್ಮಿಸಿದ.[೧೧] ಈ ಮೂವರ ಹೆಸರಿನಲ್ಲಿ ಮೂರು ಶಿವಲಿಂಗಗಳನ್ನು ಈ ದೇಗುಲದಲ್ಲಿ ಪ್ರತಿಷ್ಠಾಪಿಸಿದ. ಇದು ಹೊಯ್ಸಳರ ತ್ರಿಕೂಟಾಚಲವನ್ನು ನೆನಪಿಸುತ್ತದೆ. ಇವನು ಬೇಲೂರಿನ ಚನ್ನಕೇಶವ ದೇವಾಲಯಕ್ಕೆ ದತ್ತಿಗಳನ್ನು ನೀಡಿರುವುದರಿಂದ ಹೊಯ್ಸಳ ದೇಗುಲಗಳ ಪರಿಚಯವಿರುವುದು ಸ್ಪಷ್ಟವಾಗುತ್ತದೆ. ಆ ದೇಗುಲಗಳ ವಾಸ್ತು ವಿನ್ಯಾಸಗಳ ಬಗ್ಗೆ ಇವನಿಗಿರುವ ಆಕರ್ಷಣೆಯೇ ತಿಮ್ಮಾಪುರದ ಶಿವಾಲಯದ ನಿರ್ಮಾಣಕ್ಕೆ ಪ್ರೇರಣೆ, ಪ್ರಚೋದನೆ ನೀಡಿರಬೇಕು. ವಿಜಯನಗರ ಸಮ್ರಾಜ್ಯದ ಉದ್ದಗಲಕ್ಕೂ ಚದುರಿದಂತೆ ನಿರ್ಮಾಣವಾಗಿರುವ ಈ ಕಾಲದ ಸಾವಿರಾರು ದೇಗುಲಗಳ ನಡುವೆ ಕಾಣಸಿಗುವ ಏಕೈಕ ತ್ರಿಕೂಟಾಚಲ ದೇಗುಲವೆಂದರೆ ಇದೊಂದೇ. ಈ ದೇಗುಲಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿವರವಾಗಿ ತಿಳಿಯಬಹುದು. ಮೇಲೆ ತಿಳಿಸಿದ ದೇಗುಲಗಳಷ್ಟೇ ಅಲ್ಲದೆ, ಬಯಕಾರ ರಾಮಪ್ಪನು ಮಲ್ಲಿಕಾರ್ಜುನ, ವೀರಭದ್ರ, ದೇವೇಶ ಮತ್ತು ಕಾಶಿವಿಶ್ವನಾಥ ದೇವಾಲಯಗಳನ್ನು ತಿಮ್ಮಪುರದಲ್ಲೇ ಕಟ್ಟಿಸಿದನೆಂದು ಹೇಳಿಕೊಂಡಿದ್ದಾನೆ.

ಆದರೆ ಮಲ್ಲಿಕಾರ್ಜುನ ದೇವಾಲಯವನ್ನು ಇವನ ಅಧಿಕಾರಿ ನಮ ಶ್ಶಿವಾಯನು ತನಗೆ ಪುಣ್ಯ ಪ್ರಾಪ್ತವಾಗಲೆಂದು ಕಟ್ಟಿಸಿದನೆಂದು ಅದೇ ದೇವಾಲಯದ ಶಾಸನವು ತಿಳಿಸುತ್ತದೆ. ಬಯಕಾರ ರಾಮಪ್ಪನು ಈ ದೇಗುಲವನ್ನು ಕಟ್ಟಿಸಲು ತನ್ನ ಅಧಿಕಾರಿಗೆ ಪ್ರೇರಣೆ ನೀಡಿದ್ದರಿಂದ ಈ ನಿರ್ಮಾಣದ ಯಶಸ್ಸನ್ನು ತನ್ನದೆಂದು ಶ್ರುತಪಡಿಸುತ್ತಾನೆ. ಇದು ಇವನ ದೃಷ್ಟಿಯಿಂದ ಸಹಜವೂ ಹೌದು. ಇಲ್ಲಿನ ಜೀರ್ಣಾವಸ್ಥೆಯಲ್ಲಿರುವ ವೀರಭದ್ರ ದೇವಾಲಯದ ಮುಂದೆ ಸುಂದರವಾದ ಬಾವಿಯೊಂದಿದೆ.

ಇದಕ್ಕೆ ೯೦° ಪಾವಟಿಗೆಗಳನ್ನು ನಿರ್ಮಿಸಲಾಗಿದೆ. ಇದನ್ನು ಬಯಕಾರ ರಾಮಪ್ಪನು ತನ್ನ ಮಗ ಲಿಂಗಾಲಯ್ಯನಿಗೆ ಪುಣ್ಯ ಪ್ರಾಪ್ತವಾಗಲೆಂದು ಕಟ್ಟಿಸಿ, ಅದನ್ನು ಲಿಂಗಾಲಯ ಬಾವಿ ಎಂದು ಕರೆದಿದ್ದಾನೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಹುಲಿಕುಂಟದಲ್ಲಿ ಮತ್ತೊಂದು ಅಗ್ರಹಾರವನ್ನು ನಿರ್ಮಿಸಿದ. ತನ್ನ ಮಗಳಾದ ಅಚ್ಯುತಮ್ಮ ಪುರವೆಂದು ಕರೆದ. ಇಲ್ಲಿ ಬಾಲಕೃಷ್ಣ ದೇಗುಲವನ್ನು ಕಟ್ಟಿಸಿದ. ಈತನ ಶಿಷ್ಯೆ ಗೋಪಮ್ಮಳು ತಿಮ್ಮಾಪುರದಲ್ಲಿ ಕಾಶೀನಾಥ ದೇವರ ಗುಡಿಯನ್ನು ಕಟ್ಟಿಸಲು ಇವನು ಕಾರಣನಾದ. ಪ್ರಾಯಶಃ ಸಂಗೀತ ಮತ್ತು ಆಗಮ ಶಾಸ್ತ್ರಗಳನ್ನು ಬೋಧಿಸಿದ್ದಕ್ಕೆ ಪ್ರತಿಯಾಗಿ ಗುರುಕಾಣಿಕೆಯಾಗಿ ಆಕೆ ಈ ದೇಗುಲವನ್ನು ಕಟ್ಟಿಸಿರಬೇಕು.

ಬಯಕಾರ ರಾಮಪ್ಪನ ಸಾಧನೆಗಳಿಂದ ಪ್ರಭಾವಿತರಾದ ಇವನ ಸಂಬಂಧಿಗಳು ಇವನಂತೆಯೇ ಉತ್ತಮ ವಾಸ್ತು ಕೃತಿಗಳನ್ನು ನಿರ್ಮಿಸಿದರು, ಜನಹಿತ ಕಾರ್ಯಗಳನ್ನು ಕೈಗೊಂಡರು. ಇವನ ಸೋದರತ್ತೆ ಚಿನ್ನಮಾಂಬ ಮತ್ತು ಆಕೆಯ ಪತಿ ಪ್ರತಾಪಯಲ್ಲನು ಕೊಂಡುವೀಡು ಪ್ರದೇಶದಲ್ಲಿ ಅಗ್ರಹಾರವನ್ನು ಸ್ಥಾಪಿಸಿ, ಶಿವನ ಹೆಸರಿನಲ್ಲಿ ಪವ್ತನಾಥ ಎಂಬ ದೇಗುಲವನ್ನು ಕಟ್ಟಿಸಿದರು. ಅವರು ಅಲ್ಲೇ ಗೋಪಿನಾಥ ಸಮುದ್ರವೆಂಬ ದೊಡ್ಡ ತಟಾಕವನ್ನು ನಿರ್ಮಿಸಿದನು. ಅವರು ಆಂಧ್ರದ ಗುಂಟೂರು ಜಿಲ್ಲೆಯ ನರಸರಾವಪೇಟೆ ತಾಲೂಕಿನ ವೆಂಕಯಲಪಾಡು ಅಥವಾ ಸಂತನೂರು ಎಂಬಲ್ಲಿ ಕಾಣಬಹುದು.

ಇದಕ್ಕಿಂತ ಭಿನ್ನವಾದ ಸತ್ಕಾರ್ಯಗಳಲ್ಲಿ ಬಯಕಾರ ರಾಮಪ್ಪನು ತನ್ನನ್ನು ತೊಡಗಿಸಿಕೊಂಡು ಜನಸಮೂಹದ ಸೌಖ್ಯಕ್ಕಾಗಿ ದುಡಿದ. ಮೇಲಿನವು ಪಾರಮಾರ್ಥಿಕ ಸಾಧನೆಯಾದರೆ ಮುಂದಿನವು ಲೌಕಿಕ ಕರ್ತವ್ಯಗಳಾಗಿವೆ. ನಾಡಿನ ಜನತೆಯ ಹಿತಕ್ಕೋಸ್ಕರ ಇವನು ಸುಮಾರು ಹದಿನಾರಕ್ಕೂ ಹೆಚ್ಚು ಕೆರೆಗಳು ಮತ್ತು ಹಲವಾರು ಬಾವಿಗಳನ್ನು ತೋಡಿಸುವುದರ ಮೂಲಕ ಪ್ರಾಚೀನ ಪರಂಪರೆಯನ್ನು ಮುಂದುವರೆಸಿದ. ಅಷ್ಟೊಂದು ಕೆರೆಗಳನ್ನು ಏಕ ವ್ಯಕ್ತಿಯಾಗಿ ನಿರ್ಮಿಸುವುದು ಮಹತ್ತರವಾದ ಸಾಧನೆಯೇ. ಅರಸ ಅಥವಾ ಅಧಿಕಾರಿ ಯಾರೇ ಆಗಿರಲಿ ಅಷ್ಟು ಅಧಿಕ ಸಂಖ್ಯೆಯಲ್ಲಿ ಒಬ್ಬನೇ ಕೆರೆಗಳನ್ನು ಕಟ್ಟಿಸಿರುವ ಉದಾಹರಣೆ ನಾಡಿನ ಇತಿಹಾಸದಲ್ಲಿ ಅಪರೂಪವೇ. ಇವನು ನಿರ್ಮಿಸಿದ ಕೆರೆಗಳೆಲ್ಲವೂ ದೊಡ್ಡವು. ಅವುಗಳನ್ನು ಜನರು ಇಂದಿಗೂ ಉಪಯೋಗಿಸುತ್ತಿದ್ದಾರೆ.

ಅವು ಹೀಗಿವೆ. ಬಾಚ ಸಮುದ್ರಂ, ರಾಮ ಸಮುದ್ರಂ, ಅಕ್ಕ ಸಮುದ್ರಂ, ಕಾಮ ಸಮುದ್ರಂ, ಅಮ್ಮ ಸಮುದ್ರಂ, ವೀರ ಸಮುದ್ರಂ, ಅಚುತೇಂದ್ರ ಸಮುದ್ರಂ, ವೆಂಕಟೇಂದ್ರ ಸಮುದ್ರಂ, ಪಿನಲಕ್ಕ ಸಮುದ್ರಂ, ಚಿನತಿಪ್ಪ ಸಮುದ್ರಂ, ಪೆದಲಕ್ಕ ಸಮುದ್ರಂ, ಅಚ್ಚುತಮ್ಮ ಸಮುದ್ರಂ, ಲಿಂಗಾಲಯ್ಯ ತಟಾಕಂ, ವೆಂಕಟಯ್ಯ ತಟಾಕಂ, ಪೆದತಿಮ್ಮ ಸಮುದ್ರಂ, ಚಿನ್ನಬಾಸ ಸಮುದ್ರಂ.

ಈ ಎಲ್ಲ ಕೆರೆಗಳನ್ನು ಅವನ ಹತ್ತಿರದ ಸಂಬಂಧಿಕರ ಮತ್ತು ಅರಸರ ಹೆಸರಿನಲ್ಲಿ ಕಟ್ಟಿಸಲಾಗಿದೆ. ಈಗಿನ ಸಂಶೋಧನೆಯ ಬೆಳಕಿನ ಹಿನ್ನೆಲೆಯಲ್ಲಿ ಕೆಲ ಕೆರೆ–ತಟಾಕಗಳನ್ನು ಗುರುತಿಸಬಹುದು.[೧೨] ಸಂಡೂರು ತಾಲೂಕಿನ ಚಿಕ್ಕಕೇರಿಯಾಗಿನ ಹಳ್ಳಿಯಲ್ಲಿ ಕೆರೆಯೊಂದಿದ್ದು, ಅದರ ಪಕ್ಕದಲ್ಲಿರುವ ಶಾಸನವು ಬಯಕಾರ ರಾಮಪ್ಪನು ಕಟ್ಟಿಸಿದ ಹಿರಿಯಲಕ್ಕ–ಸಮುದ್ರ ಅಥವಾ ಪೆದಲೆಕ್ಕ–ಸಮುದ್ರವೆಂದು ತಿಳಿಸುತ್ತದೆ.

ಇದನ್ನು ಇವನು ತನ್ನ ತಾಯಿಯ ಹೆಸರಿನಲ್ಲಿ ಕಟ್ಟಿಸಿದನು. ಮೇಲೆ ತಿಳಿಸಿರುವ ಲಿಂಗಾಲಯ ತಟಕವನ್ನು ಅದೇ ತಾಲೂಕಿನ ಶಿರಟ್ಟಿ ಹಳ್ಳಿಯಲ್ಲಿ ನಿರ್ಮಿಸಲಾಗಿದೆ. ಈ ತಟಾಕವನ್ನು ತನ್ನ ಮಗ ಲಿಂಗಾಲಯ್ಯನಿಗೆ ಪುಣ್ಯವಾಗಲೆಂದು ಕಟ್ಟಿಸಿದ. ಹಗರಿಬೊಮ್ಮನಹಳ್ಳಿ ತಾಲೂಕಿನ ಮಂಗಿಮಾವಿನಹಳ್ಳಿಯಲ್ಲಿ ತನ್ನ ಮಗಳಾದ ಕಾಮಮ್ಮನ ಹೆಸರಿನಲ್ಲಿ ಕಾಮಸಮುದ್ರವನ್ನು ತೋಡಿಸಿದ. ಅಚ್ಚುತಮ್ಮನ ಹೆಸರಿನಲ್ಲಿರುವ ಅಚ್ಚುತಮ್ಮ ಸಮುದ್ರವನ್ನು ಸಂಡೂರು ತಾಲೂಕಿನ ಹುಲಿಕುಂಟದಲ್ಲಿ ಕಾಣಬಹುದು. ಅಂಕಸಮುದ್ರವನ್ನು ತನ್ನ ಮಗ ಆಕಪ್ಪನ ಹೆಸರಿನಲ್ಲಿ ಪೋತಲಕಟ್ಟೆ ಗ್ರಾಮದಲ್ಲಿ ಕಟ್ಟಿಸಿದ್ದಾನೆ. ಬಾಚ ಸಮುದ್ರವನ್ನು ತನ್ನ ಚಿಕ್ಕಪ್ಪ ಬಾಚರಸನ ಹೆಸರಿನಲ್ಲಿ ತಿಮ್ಮಲಾಪುರದಲ್ಲೂ, ವೀರ ಸಮುದ್ರವನ್ನು ತನ್ನ ಪತ್ನಿ ವೀರಮ್ಮನ ಹೆಸರಿನಲ್ಲಿ ವಂಟಿಗೋಡು ಗ್ರಾಮದಲ್ಲೂ, ತಿಮ್ಮ ಸಮುದ್ರವನ್ನು ತನ್ನ ತಂದೆಯ ಹೆಸರಿನಲ್ಲಿ ನಂದಿಹಳ್ಳಿಯಲ್ಲಿ ಬಯಕಾರ ರಾಮಪ್ಪನು ಕಟ್ಟಿಸಿದ್ದಾನೆ.

ಇವಲ್ಲದೇ ತಾನು ಸ್ಥಾಪಿಸಿದ ಅಗ್ರಹಾರಗಳಲ್ಲಿ ಸುಂದರವಾದ ಕಲ್ಯಾಣಿ ರೂಪದ ಬಾವಿಗಳನ್ನು ತೋಡಿಸಿದ್ದಾನೆ. ಇವರು ತನ್ನ ಮಗ ಲಿಂಗಾಲಯ್ಯನ ಹೆಸರಿನಲ್ಲಿ ಬಾವಿ ತೋಡಿಸಿರುವುದನ್ನು ಹಿಂದೆಯೇ ಗಮನಿಸಿದ್ದೇವೆ. ತಿಮ್ಮಾಪುರ ಮಲ್ಲಿಕಾರ್ಜುನ ದೇಗುಲದ ಪಕ್ಕದಲ್ಲೇ ಬಾವಿಯೊಂದಿದೆ. ಈ ಬಾವಿಗೆ ಇಳಿಯಲು ರಚಿಸಿರುವ ಪಾವಟಿಗೆಗಳ ಚೆಲುವಿನ ದ್ವಾರವೊಂದಿತ್ತು. ಅದರ ವಿವಿಧ ಭಾಗಗಳನ್ನು ಇಂದೂ ಕಾಣಬಹುದು. ಬಯಕಾರ ರಾಮಪ್ಪನು ತನ್ನ ಕುಟುಂಬದ ಇತರ ಸದಸ್ಯರಂತೆ ತಿರುಮಲ–ತಿರುಪತಿ ದೇಗುಲದ ಅನನ್ಯ ಭಕ್ತ. ಇವನ ತಂದೆ ತಿಮ್ಮರಸಯ್ಯನು ಕೊಂಡವೀಡು ಸೀಮೆಗೆ ಸೇರಿದ ಮೂರು ಗ್ರಾಮಗಳನ್ನು ತಿರುಪತಿಯ ಗೋವಿಂದರಾಜಸ್ವಾಮಿ ಅಭಿಷೇಕಕ್ಕಾಗಿ ದಾನವಾಗಿ ನೀಡಿದ್ದ. ರಾಮಪ್ಪಯ್ಯನು ತನ್ನ ತಂದೆಯ ದಾನವನ್ನು ನವೀಕರಿಸಿದ್ದಲ್ಲದೆ, ಇನ್ನೂ ಹಲವಾರು ಗ್ರಾಮಗಳನ್ನು ಗೋವಿಂದರಾಜಸ್ವಾಮಿಗೂ, ಆ ದೇಗುಲದ ಆವರಣದಲ್ಲಿರುವ ಪರಿವಾರ ದೇವತೆಗಳ ಪೂಜೆಗಾಗಿ ಕ್ರಿ.ಶ.೧೫೪೪ರಲ್ಲಿ ನೀಡಿದ. ಇವುಗಳನ್ನು ಬಾಚರಸಯ್ಯನ ಮಗ ಕೃಷ್ಣಪ್ಪನಿಗೆ ಪುಣ್ಯಪ್ರಾಪ್ತವಾಗಬೇಕು ಎಂದು ದಾನವಾಗಿ ನೀಡಿದ್ದುಂಟು. ಇದರ ಪೂಜೆಯಿಂದ ಬರುವ ಪ್ರಸಾದದ ಒಂದು ಭಾಗವನ್ನು ಅದೇ ದೇಗುಲದ ಸ್ಥಾನಿಕರಾದ ಶ್ರೀನಿವಾಸ ಭಟ್ಟರಿಗೆ ನೀಡಿದ.

ಶ್ರೀನಿವಾಸ ಭಟ್ಟರು ಕಾಳಿದಾಸನ ಶಾಕುನ್ತಲ ನಾಟಕಕ್ಕೆ ಭಾಷ್ಯವನ್ನು ಬರೆದು ಖ್ಯಾತರಾದ ವಿದ್ವಾಂಸ ಉದಯಗಿರಿ ಶ್ರೀನಿವಾಸ ಭಟ್ಟರ ಮಗ.[೧೩] ಬಯಕಾರ ರಾಮಪ್ಪನು ತನ್ನ ಅಧೀನ ಅಧಿಕಾರಿಗಳು ಮತ್ತು ಅನುಚರರು ಸಹ ತನ್ನಂತೆ ಸತ್ಕಾರ್ಯಗಳನ್ನು ಕೈಗೆತ್ತಿಕೊಳ್ಳಲು ಪ್ರೇರಣೆ

ಮತ್ತು ಪ್ರೋತ್ಸಾಹ ನೀಡಿದ ದಾನಧರ್ಮಗಳನ್ನು ಮಾಡುವ ವ್ಯಕ್ತಿಗಳಿಗೆ ಮಾರ್ಗದರ್ಶಿಯಾದ. ಇವನು ನಿರ್ಮಿಸಿದ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಲು ವಿಜಯನಗರದ ಅರಸರೂ ಸಹ ಮುಂದಾದರು. ರಾಮಪ್ಪನು ಬೂದಿಹಾಳು ಸೀಮೆಯ ಮಾಗಣೀಕಾರನಾಗಿದ್ದ ಕ್ರಿ.ಶ ೧೫೩೫ ರಲ್ಲಿ ಇವನ ಅಧಿಕಾರಿಯೊಬ್ಬ ಕಲ್ಲುಕೆರೆ ಗ್ರಾಮವನ್ನು ದೇವಾಲಯವೊಂದಕ್ಕೆ ದಾನವಾಗಿ ಇವನ ಆಣತಿಯ ಮೇರೆಗೆ ನೀಡಿದ್ದುಂಟು.

ಇವನ ಅಧಿಕಾರಿ ಮಾದಯ್ಯಪ್ಪ ಎಂಬುವನು ಜನರಿಂದ ಅರಮನೆಗೆ ಸಂದಯವಾಗಬೇಕಿದ್ದ ಸುಂಕಗಳನ್ನು ಹದಿನಾಡು ಸೀಮೆಯ ಹಳೆಯ ಮೋಡಹಳ್ಳಿ ಗ್ರಾಮದ ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ನೀಡಿದ. ಬಯಕಾರ ರಾಮಪ್ಪನು ಪ್ರತಿಭಾವಂತನಾದ ಪ್ರಸಿದ್ಧ ವಾಸ್ತುಕಾರನೂ ಹೌದು. ಇವನ ಬಹುಮುಖ ಪ್ರತಿಭೆಯನ್ನು ಅರಿತಿದ್ದ ವಿಜಯನಗರದ ಸರ್ವಾಧಿಕಾರಿ ಅಳಿಯ ರಾಮರಾಯನು ತಾನು ವಿಜಯನಗರದಲ್ಲಿ ನೂತನ ರತ್ನಕೂಟ ಅರಮನೆಯನ್ನು ಕಟ್ಟಿಸಲು ಇವನನ್ನು ಅಹ್ವಾನಿಸಿದ. ಈ ನೂತನ ಅರಮನೆಯ ನಿರ್ಮಾಣ ಪೂರ್ಣವಾದಾಗ ಅದು ನಯನಮನೋಹರವಾಗಿತ್ತು.

ಇಂದ್ರನ ಅರಮನೆಯನ್ನು ಚೆಲುವಿನಲ್ಲಿ ಮೀರಿಸುವಂತಿತ್ತು. ರಾಮರಾಯನಂತೂ ತನ್ನ ಅರಮನೆಯನ್ನು ನೋಡುತ್ತಾ ಆನಂದ ತುಂದಿಲವಾದನಂತೆ ಇತೀಚೆಗೆ ವಿದ್ವಾಂಸರೊಬ್ಬರು, ರಾಮರಾಯನು ಬಯಕಾರ ರಾಮಪ್ಪನ ನೇತೃತ್ವದಲ್ಲಿ ಕಟ್ಟಿಸಿದ ರತ್ನಕೂಟ ಅರಮನೆಯನ್ನು ಹಂಪಿಯ ಕಮಲಮಹಲೆಂದು ಪತ್ತೆ ಹಚ್ಚಲು ಪ್ರಯತ್ನಿಸಿದ್ದಾರೆ. ಆದರೆ ರತ್ನಕೂಟವು ಕೇವಲ ಕಮಲಮಹಲ್ ಮಾತ್ರವೇ ಆಗಿರದೆ, ಈಗ ಜನಾನ ಅಥವಾ ರಾಣಿಯರ ವಾಸಸ್ಥಳವೆಂದು ಕರೆಯಲಾಗಿರುವ ಕಟ್ಟಡಗಳ ಸಮುಚ್ಚಯವೇ ಆಗಿದೆ–ಎಂಬುದು ಗಮನಾರ್ಹವಾದ ಅಂಶ.

ರಾಮಪ್ಪನು ತನ್ನ 'ಸ್ವರಮೇಳಕಲಾನಿಧಿ' ಗ್ರಂಥದಲ್ಲಿ ರತ್ನಕೂಟವು ಇಂದ್ರಸಭಾ, ಕ್ರೀಡಾಭವನದಂತಹ ಉಪ ಅರಮನೆಗಳನ್ನು ಒಳಗೊಂಡಿತ್ತೆಂದು ತಿಳಿಸುತ್ತಾನೆ. ಅವುಗಳಲ್ಲೊಂದು ಭವನವು ಜಲಾವೃತವಾಗಿ ಹಂಸಗಳಿಂದ ಅಲಂಕೃತವಾಗಿತ್ತೆಂದು ಅವನು ಮತ್ತೂ ಮುಂದುವರೆದು ವಿವರಿಸುತ್ತಾನೆ. ಕಮಲಮಹಲಿನ ಮುಂದೆ ಅರಮನೆಯ ಪಾಯವೊಂದಿದೆ. ಇದರ ಸುತ್ತಲೂ ನೀರು ತುಂಬಿದ್ದ ಕುರುಹುಗಳನ್ನೂ ಇಂದಿಗೂ ಕಾಣಬಹುದು. ಈ ಭವನದ ಸುತ್ತ ನೆಲದ ಮೇಲೆ ನೀರನ್ನು ಶೇಖರಿಸಿಡಲು ಗಾರೆಯನ್ನು ಲೇಪಿಸಿರುವುದು ಕಾಣುತ್ತದೆ. ಈ ಭವನಕ್ಕೆ ಹೋಗಲು ಕಿರಿಯ ಸೇತುವೆಯೂ, ನಾಲ್ಕು ಮೂಲೆಗಳಲ್ಲಿ ತೆರೆ ಕಂಬಗಳ ಕಿರಿಯ ಮಂಟಪಗಳು ಹಿಂದೆ ಇದ್ದುದ್ದನ್ನು ಸೂಕ್ಷ್ಮವಾಗಿ ಗಮನಿಸಿದರೆ ಅರಿಯಬಹುದು.

ಬಯಕಾರ ರಾಮಪ್ಪ ತಿಳಿಸಿರುವ ಹಂಸಗಳಿಂದ ಕೂಡಿದ ಜಲಾವೃತವಾದ ಭವನ ಇದೆಂದು ಸ್ಪಷ್ಟವಾಗಿ ಹೇಳಬಹುದು. ಇದರ ಪಶ್ಚಿಮಕ್ಕೆ, ಮುಂದೆಯೇ ಎತ್ತರವಾದ ಅರಮನೆಯ ಪಾಯವೊಂದಿದೆ. ಇದು ಮೂರು ಹಂತಗಳುಳ್ಳ ಭವ್ಯವಾದ ಅರಮನೆಯ ಅವಶೇಷ. ಇದರಷ್ಟು ಎತ್ತರದ ಹಾಗೂ ವಿಶಾಲವಾದ ಪಾಯ ಹಂಪಿಯಲ್ಲಿ ಮತ್ತೊಂದಿಲ್ಲ. ಇವನು ತಿಳಿಸುವ ಇಂದ್ರಸಭಾ ಭವನವೂ ಸಹ ಇದೇ ಆಗಿದೆ.[೧೪]

ಅಗ್ರಹಾರಗಳ ಸ್ಥಾಪನೆ, ದೇವಾಲಯಗಳ ನಿರ್ಮಾಣ, ವಿದ್ವತ್ಕೃತಿಗಳ ರಚನೆ, ದಾನಧರ್ಮ ಕಾರ್ಯಗಳು ಮುಂತಾದ ನಿರಂತರ ಕ್ರಿಯಾಶೀಲ ಚಟುವಟಿಕೆಗಳಲ್ಲಿ ತೊಡಗಿದ್ದ ಬಯಕಾರ ರಾಮಪ್ಪನ ಜ್ಞಾನ ಮತ್ತು ಅಭಿರುಚಿಗಳು ನಿಜಕ್ಕೂ ವಿಶ್ವಕೋಶ ಸದೃಶವಾದದ್ದು. ಇವನ ಅಧ್ಯಾತ್ಮಿಕ ಚಾಲನೆಗಳು, ಬೌದ್ಧಿಕ ಸಮೃದ್ಧತೆ, ಅಭಿವ್ಯಕ್ತಿ, ರಾಜಕೀಯ ಏಳಿಗೆ ಮತ್ತು ತಂತ್ರಗಾರಿಕೆಗಳು, ಆಡಳಿತ ನಿರ್ವಹಣಾ ಚಾತುರ್ಯ, ಜನಹಿತ ಸೇವೆಗಳು ಇವನ ಬಹುಮುಖ ವ್ಯಕ್ತಿತ್ವ ಮತ್ತು ಪ್ರತಿಭೆಗಳಿಗೆ ಜ್ವಲಂತ ನಿದರ್ಶನಗಳಾಗಿವೆ.

**ಬಯಕಾರ ರಾಮಪ್ಪನ ಸಾಧನೆಗಳು**

ಸಾಮ್ರಾಜ್ಯಗಳು ಅಳಿಯುತ್ತವೆ, ಅದಕ್ಕೆ ಸಂಬಂಧಪಟ್ಟ ವ್ಯಕ್ತಿಗಳು ಅರಸರಿರಲಿ, ಅಧಿಕಾರಿಗಳಿರಲಿ–ಅವರೂ ಅಳಿಯುತ್ತಾರೆ. ಇದು ಅನಿವಾರ್ಯ ಆದರೆ ಅವರ ಸತ್ಕಾರ್ಯಗಳು ಉಳಿಯುತ್ತವೆ. ಅವರನ್ನು ಅಮರವಾಗಿ ಮಾಡುತ್ತವೆ. ವಿಜಯನಗರದ ಸಾಮ್ರಾಜ್ಯದ ಸಾವಿರಾರು ಉನ್ನತಾಧಿಕಾರಿಗಳ ನಡುವೆ ಬಯಕಾರ ರಾಮಪ್ಪನ ಹೆಸರು ಚಿರಂತನವಾಗಿದೆ. ಸಾಹಿತ್ಯ, ಸಂಗೀತ, ಶಿಲ್ಪ ಮತ್ತು ವಾಸ್ತು ಕ್ಷೇತ್ರಗಳಿಗೆ ಅವನು ನೀಡಿರುವ ಕೊಡುಗೆ ದೊಡ್ಡದು. ಅಗ್ರಹಾರಗಳನ್ನು ಸ್ಥಾಪಿಸುವ ಮೂಲಕ ಬಯಕಾರ ರಾಮಪ್ಪನು ಸಾಹಿತ್ಯ ಮತ್ತು ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ.

ಸ್ವತಃ ಇವನೇ ಬೋಧಕನಾಗಿದ್ದ. ಇದನ್ನು ಹಿಂದಿನ ಅಧ್ಯಾಯದಲ್ಲೆ ಗಮನಿಸಿದ್ದೇವೆ. ಇವನ ಕಾಲ ಕರ್ನಾಟಕ ಸಂಗೀತದ ಉತ್ಕರ್ಷಣೆಯ ಯುಗ. ಈ ಕಾಲದಲ್ಲಿ ಕರ್ನಾಟಕ ಸಂಗೀತ ಪ್ರಗತಿಯ ಚಳುವಳಿ ವ್ಯಾಪಕವಾಗಿ ಮತ್ತು ದಟ್ಟವಾಗಿ ಬೆಳೆಯಿತು. ಪುರಂದರದಾಸರು ಮತ್ತು ಕನಕದಾಸರು ಬದುಕಿದ್ದರು. ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆನಿಸಿಕೊಂಡು, ಸಂಗೀತದ ಬೆಳವಣಿಗೆಗೆ ಚಾಲನೆಯನ್ನು ನೀಡಿದರು. ಈ ಕ್ಷೇತ್ರದಲ್ಲಿ ಉಳಿದ ದಾಸರ ಪಾತ್ರ ಅಷ್ಟೆ ದೊಡ್ಡದು. ತೆಲುಗು ಪ್ರದೇಶದಲ್ಲಿ ತಾಳ್ಳಪಾಕಂ ಅಣ್ಣಮಾಚಾರ್ಯರು (೧೪೨೪–೧೫೦೩) ಸಂಗೀತ ಕ್ಷೇತ್ರವನ್ನು ಮಹತ್ತರವಾಗಿ ಶ್ರೀಮಂತಗೊಳಿಸಿದರು.

ಇವರೆಲ್ಲರ ಪ್ರಭಾವ ಬಯಕಾರ ರಾಮಪ್ಪನ ಮೇಲೆ ಆಗಿರಬೇಕು. ಸಮಕಾಲೀನ ಸಂಗೀತ ತಜ್ಞರಾದ ಸೋಮನಾಥ, ಪುಂಡರೀಕ-ವಿಠ್ಠಲನಂತೆ ಇವನೂ ಕೂಡ ದೀರ್ಘಕಾಲದಿಂದಲೂ ಬೆಳೆದುಬಂದಿದ್ದ ಸಂಗೀತ ಪರಂಪರೆಯನ್ನು ಮುಂದುವರೆಸಿದ. ಇವನ ಪಿತಾಮಹ ಕಲ್ಲಿನಾಥನು ಮಹಾನ್ ಸಂಗೀತ ವಿದ್ವಾಂಸನಾಗಿರುವುದನ್ನು ಮುಂದುವರೆಸಿದ. ಇವನ ಪಿತಾಮಹ ಕಲ್ಲಿನಾಥನು ಮಹಾನ್ ಸಂಗೀತ ವಿದ್ವಾಂಸನಾಗಿರುವುದನ್ನು ಹಿಂದೆಯೇ ಅರಿತಿದ್ದೇವೆ.

ಆದ್ದರಿಂದ ಸಂಗೀತ ವಿದ್ವತ್ತು ಇವನಿಗೆ ಅನುವಂಶಿಕವಾಗಿ ಬಂದಿತ್ತು. ಸಂಗೀತ ಚಳುವಳಿ ಬೆಳದಂತೆ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುವುದು ಸಾಮನ್ಯ ಸಂಗತಿ. ಸಂಗೀತದ ಸಿದ್ಧಾಂತಗಳು ಮತ್ತು ರೂಢಿಯಲ್ಲಿದ್ದ ಹಾಡುಗಾರಿಕೆಯ ನಡುವೆ ಲಕ್ಷ್ಯ ಮತ್ತು ಲಕ್ಷಣಗಳ ನಡುವೆ ಹೊಂದಾಣಿಕೆಯನ್ನು ರೂಪಿಸಲು, ಸಂಗೀತ ವಿದ್ವಾಂಸನಾದ ಇವನನ್ನು ಅಳಿಯ ರಾಮರಾಯನು ನೇಮಿಸಿದ್ದರಲ್ಲಿ ಅಚ್ಚರಿಯೇನಿಲ್ಲ.[೧೫]

**ಕೊನೆ ಟಿಪ್ಪಣಿ**

೧. ವಾಸುದೇವ ಬಡಿಗೇರ.,೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಿಸರ, ಪು.ಸಂ.೪

೨. ನಾಯಕ ಹಾ.ಮಾ. (ಸಂ), ಕನ್ನಡ ವಿಷಯ ವಿಶ್ವಕೋಶ ಪು.೯೮೬೫–೯೭

೩. ಅದೇ

೪. ಗೆಜೆಟಿಯರ್ ಆಫ್ ಇಂಡಿಯಾ, ಬಳ್ಳಾರಿ ಜಿಲ್ಲೆ. ಪು.ಸಂ.೫–೧೩

೫. ಚಂದ್ರಶೇಖರ ಟಿ.ಆರ್.,ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು, ಪು.೪೭–೪೮

೬. ವಾಸುದೇವ ಬಡಿಗೇರ., ಪೂರ್ವಕ್ತ

೭. ಅದೇ

೮. ಅದೇ

೯. ಎಚ್.ತಿಪ್ಪೇಸ್ವಾಮಿ.,೨೦೧೪, ಬಯಕಾರ ರಾಮಪ್ಪನ ಜನಪರ ಸೇವೆ, ಪು.ಸಂ.೨

೧೦. ಅದೇ.....

೧೧. ಅದೇ....

೧೨. ಕರ್ನಾಟಕ ಶಾಸನ ಸಂಪುಟ (ಬಳ್ಳಾರಿ ಜಿಲ್ಲೆ), ೧೯೯೭, ಪು.ಸಂ.೧೬೩

೧೩. ಎಸ್.ಎನ್.ಶಿವರುದ್ರಸ್ವಾಮಿ., ೨೦೦೦, ಬಯಕಾರ ರಾಮಪ್ಪ, ಪು.ಸಂ ೧೨

೧೪. ರಾಮಸ್ವಾಮಿ ಅಯ್ಯರ್,ಎಮ್.ಎಸ್, ೧೯೨೬, ಸ್ವರಮೇಳ ಕಲಾನಿಧಿ, ಪು.ಸಂ.೧

೧೫. ಎಸ್.ಎನ್.ಶಿವರುದ್ರಸ್ವಾಮಿ, ೨೦೦೫, ತಿಮ್ಮಲಾಪುರ ಅಗ್ರಹಾರ, ಪು.ಸಂ.೭

## ಅಧ್ಯಾಯ ೩ : ಬಯಕಾರ ರಾಮಪ್ಪಯ್ಯ ಕಟ್ಟಿಸಿದ ಕೆರೆಗಳು

ಭಾರತ ದೇಶದಲ್ಲಿ ಅನಾಧಿ ಕಾಲದಿಂದಲೂ ಕೆರೆಗಳ ಬಗ್ಗೆ ಉಲ್ಲೇಖ ಕಾಣುತ್ತವೆ. ಕೆರೆಗಳನ್ನು ಕಟ್ಟಿಸುವುದು ಧಾರ್ಮಿಕ ಕಾರ್ಯವೆಂದು, ದೇವಾಲಯ ನಿರ್ಮಾಣದಷ್ಟೆ ಮಹೋನ್ನತ ಕಾರ್ಯವೆಂದು ನಮ್ಮ ಪರಂಪರೆಯ ನಂಬಿಕೆಯಾಗಿತ್ತು. ಧಾರ್ಮಿಕ ಭಾವನೆಗಳಿಂದಾಗಿ ಅಂದಿನ ನೀರಾವರಿ ಕಾರ್ಯಕ್ಕೆ ಚಾಲನೆ ದೊರೆಯಿತು. ಕೆರೆಗಳನ್ನು ಕಟ್ಟಿಸಿ ಅದನ್ನು ಜನರಿಗೆ ಸಮರ್ಪಿಸುವಾಗ ಅದಕ್ಕೊಂದು ಹೆಸರಿಡುವುದು ಸಾಮಾನ್ಯವಾಗಿತ್ತು. ಪ್ರಮುಖವಾಗಿ ಸಾರ್ವಜನಿಕರ ಹಿತಸಕ್ತಿಗಾಗಿ ಸಮಾಜಮುಖಿ ಕಾರ್ಯಗಳನ್ನು ಅನೇಕ ರಾಜ ಮಹಾರಾಜರು ಮಾಡಿದ್ದಾರೆ. ಮನುಷ್ಯನ ಬೆಳವಣಿಗೆಗೆ ನೀರು ಎಷ್ಟು ಅವಶ್ಯಕವಾಗಿದೆ ಎಂದರೆ ತನ್ನ ಜೀವನ ರೂಪಿಸಲು ಇದು ಮುಖ್ಯವಾಗಿದೆ. ಒಂದು ಕೆರೆ ಕಟ್ಟಿಸಲು ಹಾಗೂ ಆ ಕೆರೆಯ ನಿರ್ಮಾಣ ಆಗಬೇಕಾದರೆ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಇಂತಹ ಪರಿಸ್ಥಿತಿಯಲ್ಲೂ ಕೈಗೊಂಡು ನಿರ್ಧಾರಗಳು ಹೊಸ ಯೋಜನೆಯನ್ನೆ ರೂಪಿಸುತ್ತವೆ. ಆಗಾಗಿ ಕೆರೆಗಳು ಏನನ್ನು ಹೊಂದಿರಬೇಕು ಮತ್ತು ಅವುಗಳಿಗೆ ಬೇಕಾದ ವಿವಿಧ ಭಾಗಗಳನ್ನು ಈ ಕೆಳಗಿನಂತೆ ನೋಡಬಹುದು.

### ಜಲಾನಯನ

ನೀರಾವರಿಗೆ ಬಳಸಲಾಗುವ ಎಲ್ಲಾ ನೀರಿನ ಮೂಲವು ಮಳೆಯೇ ಆಗಿದೆ. ಮಳೆ ಭೂಮಿಯ ಮೇಲೆ ಬಿದ್ದಾಗ ಅದರ ನೀರು ಹರಿದು ಹೋಗದಂತೆ ಅಲ್ಲಿನ ಸಸ್ಯವರ್ಗ ಅದನ್ನು ತಡೆಯುತ್ತದೆ. ನೀರಿನ ಸ್ವಲ್ಪ ಭಾಗ ಭೂಮಿಯಲ್ಲಿ ಇಂಗುವುದು. ಸ್ವಲ್ಪ ಭಾಗವನ್ನು ಗಿಡಮರಗಳ ಬೇರುಗಳು ಹೀರುತ್ತವೆ. ಮಿಕ್ಕ ನೀರು ಸಣ್ಣ ಸಣ್ಣ ಹಳ್ಳಗಳಾಗಿ ಹರಿದು ಒಂದುಗೂಡಿ ತನ್ನ ಮಟ್ಟವನ್ನು ತಾನೇ ಹುಡುಕುತ್ತಾ ಕೆಳಗಿಳಿಯುತ್ತ ದೊಡ್ಡ ಹಳ್ಳಗಳಾಗಿ ಹರಿಯುತ್ತವೆ. ಇಂತಹ ದೊಡ್ಡ ಹಳ್ಳಗಳಿಗೆ ಒಡ್ಡು ಕಟ್ಟುವುದರಿಂದ ಕೆರೆಗಳಾಗುತ್ತವೆ.

ಮಳೆ ಬಿದ್ದಾಗ ನೀರು ಎತ್ತರದ ಕಡೆಯಿಂದ ತಗ್ಗಿನತ್ತ ಹರಿಯುತ್ತದೆ. ಕೆರೆಗೆ ನೀರು ಹರಿದು ಬರುವ ಸ್ಥಳಕ್ಕೆ ಕ್ಯಾಚ್‌ಮೆಂಟ್ ಏರಿಯಾ ಎನ್ನುವುರು. ಯಾವ ಪ್ರದೇಶವು ಮಳೆಯ ನೀರನ್ನು ಪಡೆದು ಕೆರೆ, ಹೊಳೆಗಳಿಗೆ ಅದನ್ನು ಸೇರಿಸುವ ಕೆಲಸ ಮಾಡುವುದೋ ಅದನ್ನು ಜಲಾನಯನ ಪ್ರದೇಶವೆನ್ನುವರು. ಮಳೆ ಬೀಳುವ ಪ್ರದೇಶ ಮತ್ತು ಕೆರೆಗೆ ಹರಿದುಬಂದು ಸೇರುವ ನೀರಿನ ಪ್ರಮಾಣಗಳು ಪರಸ್ಪರ ಸಂಬಂಧವನ್ನು ಹೊಂದಿರುತ್ತದೆ.

**ಕೆರೆಯ ಅಂಗಳ**

ಕೆರೆಗೆಳ ಅಡ್ಡಲಾಗಿ ಏರಿ ಕಟ್ಟಿದಾಗ, ಅದರ ಹಿಂದೆ ನೀರು ಸಂಗ್ರಹವಾಗುತ್ತದೆ. ಆ ಪ್ರದೇಶವೇ ಕೆರೆಯ ಅಂಗಳ. ಈ ಭಾಗವು ಸಾಮಾನ್ಯ ಭೂಪ್ರದೇಶವಾಗಿದ್ದು, ಇಲ್ಲಿ ನೀರು ಸಂಗ್ರಹಗೊಳ್ಳುತ್ತದೆ.

ಕೆರೆಯ ಈ ಭಾಗದಲ್ಲಿ ಚಿಕ್ಕ ಹಳ್ಳಗಳಿಂದ ನೀರು ಹರಿದುಬಂದು ಶೇಖರಗೊಳ್ಳುತ್ತದೆ. ಹೆಚ್ಚು ಮಳೆಯಾಗಿ ಅಧಿಕ ನೀರು ಬಂದಂತೆ, ನೀರಿನ ಹರವು ವಿಸ್ತಾರಗೊಳ್ಳುವುದರೊಂದಿಗೆ, ಕೆರೆಯು ತುಂಬುತ್ತಾ ಹೋಗುತ್ತದೆ. ಭೂಮಟ್ಟದಿಂದ ಕಟ್ಟೆಯ ಗರಿಷ್ಠ ಮಟ್ಟ ಮುಟ್ಟಿದೆಯೆನ್ನುತ್ತಾರೆ. ಕನಿಷ್ಠ ಮಟ್ಟದ ನೀರು ನಿಲ್ಲುವ ಕೆರೆಯ ಭೂಭಾಗಕ್ಕೆ ಅಂಗಳ ಎಂದು ಹೆಸರು.[೧]

ಕೆರೆ ತಳಭಾಗದ ಮಣ್ಣು ಜಿಗುಟಾಗಿದ್ದು ಜೇಡಿಮಣ್ಣಿನಿಂದ ಕೂಡಿದ್ದರೆ ಒಳಿತು. ಅಂಗಳದಲ್ಲಿ ನೀರು ಸೋರಿ ಹೋಗಬಾರದು ಮತ್ತು ನೀರು ನುಂಗಬಾರದು. ಅಂಗಳದಲ್ಲಿ ಅಲ್ಲಲ್ಲಿ ದಿನ್ನೆಗಳಿರಬಾರದು. ಕೆರೆ ಅಂಗಳದಲ್ಲಿ ಎಷ್ಟು ನೀರು ನಿಲ್ಲವುದೋ ಅದು ಆ ಪ್ರದೇಶದ ನೀರಿನ ಹರವು. ಅದನ್ನೆ ಸಾಮಾನ್ಯವಾಗಿ ಕೆರೆಯ ಅಂಗಳ ಎನ್ನುತ್ತಾರೆ.

**ಅಚ್ಚುಕಟ್ಟು ಪ್ರದೇಶ**

ಕೆರೆಯ ಅಚ್ಚುಕಟ್ಟು ಪ್ರದೇಶವೆಂದರೆ ನೀರು ಸಂಗ್ರಹವಾಗುವ ವಿರುದ್ಧ ದಿಕ್ಕಿನ ಪ್ರದೇಶ. ಏರಿಯ ಹೊರಮುಖವೆಂತಲೂ ಹೇಳಬಹುದು. ಸಾಮಾನ್ಯವಾಗಿ ಈ ಪ್ರದೇಶದಲ್ಲಿಯೇ ವ್ಯವಸಾಯವನ್ನು ಮಾಡುತ್ತಾರೆ. ಕೆರೆಯ ನೀರಾವರಿಗೊಳಪಟ್ಟ ಅಂದರೆ ಕೃಷಿ ಮಾಡಲ್ಪಡುವ ಪ್ರದೇಶಕ್ಕೆ ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಹೆಸರು. ಇದು ಕೆರೆ ನೀರಾವರಿಗೆ ಒಳಪಟ್ಟ ಪ್ರದೇಶ. ಅಚ್ಚುಕಟ್ಟು ಪದ ಪ್ರಯೋಗವನ್ನು ಶಿಲಾಶಾಸನಗಳಲ್ಲಿ ಕಾಣಬಹುದು. ಅಚ್ಚುಕಟ್ಟು ಪ್ರದೇಶವನ್ನು ಅದರ ಗುಣಕ್ಕನುಗುಣವಾಗಿ ಉತ್ತಮ, ಮಧ್ಯಮ, ಕನಿಷ್ಠವೆಂದು ವಿಂಗಡಿಸುವ ರೂಢಿ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ.

**ಏರಿ ನಿರ್ಮಾಣ**

ಕೆರೆಯ ಒಂದು ಮುಖ್ಯವಾದ ಭಾಗವೆಂದರೆ ಏರಿ. ಇದನ್ನು ಒಡ್ಡು, ಅಡ್ಡಕಟ್ಟೆ ಎಂತಲೂ ಕರೆಯುವರು. ಏರಿ ನಿರ್ಮಾಣವಾದರೆ ಕೆರೆ ನಿರ್ಮಾಣವಾದಂತೆ, ಏರಿಗೆ ಮಣ್ಣನ್ನು ತುಂಬುವುದಕ್ಕೆ ಅನುಗುಣವಾಗಿ ಏರಿಯನ್ನು ಮೂರು ಪ್ರಕಾರಗಳಾಗಿ ವಿಂಗಡಿಸಬಹುದು.

- ಮೊದಲ ವಿಧದ ಏರಿಯ ಒಳ ಮತ್ತು ಹೊರಗೆ ಏಕಪ್ರಕಾರವಾಗಿ ಒಂದೇ ವಿಧದ ಮಣ್ಣನ್ನು ಹಾಕುವುದು. ಈ ರೀತಿಯ ಏರಿಗಳು ದಕ್ಷಿಣ ಭಾರತದಾದ್ಯಂತ ಬಳಕೆಯಲ್ಲಿವೆ.
- ಎರಡನೆಯ ವಿಧದ ಏರಿಯ ಒಳಭಾಗಕ್ಕೆ ಜಿಗುಟಾದ ಮಣ್ಣನ್ನು ತುಂಬಿ ಹೊರಭಾಗಕ್ಕೆ ಮರಳು ಮಿಶ್ರಿತ ಮಣ್ಣನ್ನು ತುಂಬುವುದು. ಈ ಪ್ರಕಾರದ ಏರಿಯ ನಿರ್ಮಾಣ ಮಹಾರಾಷ್ಟ್ರ, ಕರ್ನಾಟಕದ ಧಾರವಾಡ, ಬೆಳಗಾವಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಕಂಡುಬಂದಿದೆ.
- ಮೂರನೆಯ ವಿಧದ ಏರಿಯಲ್ಲಿ ಏರಿಯ ಒಳಗೆ ಜೇಡಿಮಣ್ಣನ್ನು ಅಥವಾ ಕಲ್ಲಗಾರೆಯಿಂದ ನಡುಗೋಡೆಯ ಕಟ್ಟೆ ಸುತ್ತಲೂ ಒಂದೇ ಗುಣಮಟ್ಟದ ಮಣ್ಣನ್ನು ಹಾಕುವುದು. ಈ ವಿಧದ ಏರಿಯನ್ನು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಪರಿಸರದಲ್ಲಿ ನೋಡಬಹುದು.[೨]

ಕರ್ನಾಟಕದಲ್ಲಿ ಕೆರೆಯ ಏರಿಯ ನಿರ್ಮಾಣಕ್ಕೆ ಉತ್ತರ ಕರ್ನಾಟಕವನ್ನು ಹೊರತುಪಡಿಸಿ ಉಳಿದ ಪ್ರದೇಶಗಳಲ್ಲಿ ಒಂದೇ ತೆರನಾದ ಮಣ್ಣನ್ನು ಬಳಸಿರುವುದು ರೂಡಿಯಲ್ಲಿದೆ. ಬಯಕಾರ ರಾಮಪ್ಪಯ್ಯನ ಕೆರೆಗಳು ಎಲ್ಲಾ ಕಲ್ಲು ಮತ್ತು ಮಣ್ಣುಗಳಿಂದ ಏರಿಗಳನ್ನು ನಿರ್ಮಿಸಿದಂತಿದೆ. ಆದುದರಿಂದ ಈ ಭಾಗವನ್ನು ಅತ್ಯಂತ ಗಟ್ಟಿಯಾಗಿ ಕಟ್ಟಬೇಕಾಗುತ್ತದೆ. ಹೀಗೆ ಏರಿಯನ್ನು ಮಣ್ಣನ್ನು ಹಾಕಿ ನೀರಿನಿಂದ ನೆನೆಸಿ ಗಟ್ಟಿ ಮಾಡಿ ಅದರ ಮೇಲೆ ಮತ್ತಷ್ಟು ಮಣ್ಣನ್ನು ಹಾಕುತ್ತಾ ಹೋಗುತ್ತಾರೆ. ಈ ರೀತಿ ಪದೇ ಪದೇ ಮಾಡುವುದರಿಂದ ಮಣ್ಣು ಚೆನ್ನಾಗಿ ಕೂಡಿಕೊಂಡು ಗಟ್ಟಿಯಾಗುತ್ತದೆ. ಏರಿಯನ್ನು ಕಟ್ಟಲು ಕೆರೆಯ ಕೆಳಭಾಗದ ಮಣ್ಣನ್ನು ಬಳಸಿಕೊಂಡು ಕೆರೆಯ ಆಳ ಮತ್ತು ಅಗಲವನ್ನು ವಿಸ್ತರಿಸಲಾಗಿದೆ. ಇದರಿಂದ ಕೆರೆಯಲ್ಲಿ ಹೆಚ್ಚಿನ ನೀರು ಸಂಗ್ರಹವಾಗುತ್ತದೆ. ಕೆರೆಯ ಏರಿಯ ಎರಡು ಬದಿಗಳು ಇಳಿಜಾರಾಗಿದ್ದು ಅದರ ಮೇಲೆ ನೀರು ನಿಲ್ಲದಂತೆ ಕಟ್ಟಲಾಗಿದೆ.

ಏರಿಯ ತಳಭಾಗದ ಆಗಲ ದೊಡ್ಡದಾಗಿದ್ದು, ಪಾರ್ಶ್ವದ ಇಳಿಜಾರುಗಳಿಗೆ ಅನುಗುಣವಾಗಿ ನಿರ್ಮಿಸಲಾಗಿದೆ. ಏರಿಯ ಮೇಲ್ಭಾಗದ ಆಗಲ ಕಿರಿದಾಗಿದ್ದು ಜನ, ದನ ಓಡಾಡುವಷ್ಟು ವಿಸ್ತಾರ ಇರುತ್ತಿತ್ತು. ಕೆಲವು ಕೆರೆಗಳ ಏರಿಗಳ ಮೇಲ್ಭಾಗದಲ್ಲಿ ವಾಹನಗಳು ಚಲಿಸುವಷ್ಟು ಆಗಲವಿದೆ. ಉದಾ: ಮೋತಲಕಟ್ಟೆ, ತೀಮ್ಮಲಾಪುರ, ಹುಲಿಕುಂಟ , ಚಿಕ್ಕಕೆರೆಯಾಗಿನ ಹಳ್ಳಿ, ಹಾರವುನಹಳ್ಳಿ ಇತ್ಯಾದಿ ಕೆರೆಗಳು. ಈ ರೀತಿಯಾಗಿ ಏರಿಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಪರ್ಕ ಕಲ್ಪಿಸುವ ಉದ್ದೇಶದಿಂದ ನಿರ್ಮಿಸಲಾಗುತ್ತಿತ್ತು. ನೀರಿನ ಬದಿಯ ಏರಿ ಹೆಚ್ಚು ಲಂಬಾಕೃತಿಯನ್ನು ಹೊಂದಿರುತ್ತದೆ. ಈ ಬದಿಯನ್ನು ದೊಡ್ಡ ಬಂಡೆಗಳಿಂದ ಕಟ್ಟಲಾಗಿದೆ. ಆ ಕಲ್ಲು ಕಟ್ಟಡದ ಕಟ್ಟುವಾಡವು ನೀರಿನ ಅಲೆಗಳ ಹೊಡೆತದಿಂದ ಏರಿಗೆ ಅಪಾಯ ಉಂಟಾಗದಂತೆ ರಕ್ಷಣೆ ಒದಗಿಸಿದೆ. ಬಾಂಡು ಕಲ್ಲುಗಳನ್ನು ಆಯಕಟ್ಟಿಗೆ ಅಧಿಕವಾಗಿ ಉಪಯೋಗಿಸಿದ್ದಾರೆ.

ಈ ಭಾಗವು ಇಳಿಜಾರಾಗಿದ್ದು ಇದನ್ನು ಕಟ್ಟುವಾಡ ಎನ್ನುವರು. ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಏರಿಗೆ ಸಾಕಷ್ಟು ಬಲವನ್ನು ಕೊಡವಲ್ಲಿ ಸಹಾಯಕವಾಗಿರುತ್ತದೆ. ಏರಿಗಳನ್ನು ಲಂಬ ಮತ್ತು ಅಗಲವಾಗಿ ಕಟ್ಟದ್ದಾರೆ ಇದರಿಂದಾಗಿ ನೀರು ಸಂಗ್ರಹಣೆಗೆ ಅನುಕೂಲವಾಗಿದೆ. ಹೆಚ್ಚಾಗಿ ಬಯಕಾರ ರಾಮಪ್ಪಯ್ಯನ ಕೆರೆಯ ಏರಿಗಳು ಊರಿನಿಂದ ಪ್ರತೇಕವಾಗಿ ಗುಡ್ಡಗಳಿಂದ ಹರಿದು ಬರುವ ನೀರಿಗೆ ಅಡ್ಡಲಾಗಿ ನಿರ್ಮಿಸಿರುವುದು ಈತನ ಏರಿಗಳ ಒಂದು ಲಕ್ಷಣ ಮುಖ್ಯವಾಗಿ ಹುಲಿಕುಂಟೆ ಕೆರೆಗೆ ಎರಡು ಗುಡ್ಡಗಳಿಗೆ ಹೊಂದಿರುವಂತೆ ನಿರ್ಮಿಸಲಾಗಿದೆ.

ಕೆರೆಗಳನ್ನು ಕಟ್ಟಿಸುವ ಸಂದರ್ಭದಲ್ಲಿ ಅವು ಮುಂದೆ ಒಡೆಯಬಾರದು ಎಂದು ಬಹಳ ಪರಿಶ್ರಮವಹಿಸಿ ಅಚ್ಚುಕಟ್ಟಾಗಿ ನಿರ್ಮಾಣಗೊಂಡಿವೆ. ಬಯಕಾರ ರಾಮಪ್ಪನು ಏರಿ ಒಡೆಯುವುದನ್ನು ತಡೆಯಲು ಕೆರೆಯ ಅಂಗಳವನ್ನು ವಿಸ್ತರಿಸಿ, ಅವುಗಳ ಏರಿಗಳನ್ನು ಬಂದೋಬಸ್ತು ಮಾಡಿಸುತ್ತಿದ್ದರು. ಒಂದು ಕೆರೆಯ ನೀರು ತುಂಬಿದ ಮೇಲೆ ಇನ್ನೊಂದು ಕೆರೆಗೆ ಹೋಗುವಂತೆ ಕಾಲುವೆ ಮತ್ತು ಕೊಡಿ ಇರುವುದನ್ನು ಕಾಣುತ್ತೇವೆ.

**ತೂಬುಗಳ ರಚನೆ**

ತೂಬುಗಳು ಕೆರೆಯ ಅವಿಭಾಜ್ಯ ಅಂಗ. ತೂಬುಗಳೇ ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆದಿರುವ ಸಾಧನಗಳಾಗಿವೆ. ಒಂದೊಂದು ಕೆರೆಗೂ ಒಂದು ಅಥವಾ ಎರಡು ತೂಬುಗಳು ಇರುತ್ತಿದ್ದವು. ಕೆಲವೊಮ್ಮೆ ಮೂರು ಅಥವಾ ನಾಲ್ಕು ಇದ್ದುದು ಉಂಟು. ಕೆರೆಯ ಗಾತ್ರ ಸಾಮರ್ಥ್ಯದ ಆಧಾರದ ಮೇಲೆ ತೂಬುಗಳನ್ನು ಅಳವಡಿಸಿಕೊಳ್ಳಲಾಗಿದೆ. ಕೆರೆಯನ್ನು ಕಟ್ಟಲು ವೆಚ್ಚ ಬರಿಸಲಾಗದವರು ಕೇವಲ ತೂಬುಗಳನ್ನಿಟ್ಟು ಕೆರೆ ಸಂರಕ್ಷಣೆಗೆ ಮುಂದಾಗಿದ್ದಾರೆ. ತೂಬುಗಳನ್ನು ಪೂಜಿಸುವ ಪದ್ಧತಿ ಈಗಲೂ ಇದೆ. ಅದನ್ನು ಕೆರೆ ಲಕ್ಕಮ್ಮ ಎಂದು ಸಹ ಕರೆಯುತ್ತಾರೆ. (ಹೊಸಪೇಟೆ ತಾಲೂಕು, ಆನಂತಶಯನ ಗುಡಿ) ಕೆರೆ ಕಣ್ಮರೆಯಾದರೂ ತೂಬುಗಳನ್ನು ಯಾರೂ ಕೀಳುತ್ತಿರಲಿಲ್ಲ.

ಹೀಗಾಗಿ ತೂಬುಗಳ ರಚನೆಯ ಕಾರ್ಯಕ್ಕೆ ಮಹತ್ವ ನೀಡಲಾಗಿದೆ. ಈ ತೂಬುಗಳಿಗೆ ಸಂಬಂಧ ಪಟ್ಟಂತೆ ಬಯಕಾರ ರಾಮಪ್ಪ ತನ್ನ ಕಾಲಾವಧಿಯಲ್ಲಿ ಇವುಗಳನ್ನು ವಿಶೇಷವಾಗಿ ನಿರ್ಮಿಸಿದ್ದಾನೆ ಇವು ಕೆರೆಗಳಿಗೆ ಆಧಾರ ಸ್ತಂಭ. ಈತನ ಕಾಲಾವಧಿಯಲ್ಲಿ ಕೈಗೊಂಡ ತಂತ್ರಜ್ಞಾನ ಮುಖ್ಯವಾಗಿರುವಂತದ್ದು. ತೂಬುಗಳನ್ನ ಕಟ್ಟಲು ಕಲ್ಲು ಕೆಲಸಗಾರರನ್ನು ನೇಮಿಸಿಕೊಳ್ಳಲಾಗುತ್ತಿತ್ತು ಹಾಗೂ ಕೆರೆಗಳನ್ನು ನಿರ್ಮಾಣ ಮಾಡಲು ನುರಿತ ಕೆಲಸಗಾರರು ಬೇಕು.[೩]

ಪ್ರಾಚೀನ ತೂಬುಗಳು ಸಾಮಾನ್ಯವಾಗಿ ಸ್ಥಳೀಯವಾಗಿ ದೊರೆಯುವ ಕಲ್ಲಿನಿಂದ ನಿರ್ಮಿಸಿದ್ದು. ಎರಡು ಕಂಬಗಳಿಂದ ಕೂಡಿರುತ್ತವೆ. ಈ ಕಂಬಗಳಿಗೆ ತಲೆಯಲ್ಲಿ ಒಂದು ನಡುವಿವಿನಲ್ಲಿ ಒಂದು ಅಡ್ಡಗಲ್ಲನ್ನು ಇರಿಸಲಾಗುತ್ತದೆ. ಈ ಎರಡು ಅಡ್ಡಕಲ್ಲುಗಳ ಮಧ್ಯೆ ಭಾಗದಲ್ಲಿ ಸುಮಾರು ೨೫ ಸೆಂ.ಮೀ. ವ್ಯಾಸದ ಒಂದು ರಂಧ್ರವಿರುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಈ ಮರದ ದಿಮ್ಮಿಯನ್ನು ಮೇಲಕ್ಕೆತ್ತಿದ್ದಾಗ ನೀರು ಕಾಲುವೆಯ ಮುಖಾಂತರ ಹರಿದು ಅಚ್ಚುಕಟ್ಟು ಪ್ರದೇಶಕ್ಕೆ ಹರಿದುಹೋಗುತ್ತದೆ. ಮರದ ವಿಶೇಷತೆ ಏನೆಂದರೆ ಅದು ನೀರಿನಲ್ಲಿ ನೆನೆದು ಹಿಗ್ಗುತ್ತದೆ.

ಈ ರೀತಿಯಾಗಿ ಹಿಗ್ಗಿದ ಮರದ ತುಂಡು ರಂಧ್ರದಲ್ಲಿ ಬಿಗಿಯಾಗಿ ಕುಳಿತು ನೀರು ಹರಿಯುವುದನ್ನು ಅದಷ್ಟು ತಡೆಯುತ್ತದೆ. ತೂಬಿನ ಅಂತರ್ ಮಾರ್ಗದ ಇನ್ನೊಂದು ತುದಿಗೆ ತೊಟ್ಟಿಯ ನಿರ್ಮಾಣವಿದ್ದು, ಒಂದು ಅಥವಾ ಮೂರು ಕಾಲುವೆಯನ್ನು ಸಂಪರ್ಕಿಸುತ್ತದೆ. ಈ ಬಗೆಯ ತೂಬುಗಳನ್ನು ಏರಿಯಿಂದ ಸುಮಾರು ೧೦ರಿಂದ ೧೫ ಅಡಿ ದೂರದಲ್ಲಿ ಇರಿಸಿದ್ದಾರೆ. ಇದರಿಂದ ಏರಿ, ತೂಬು ಮತ್ತು ಕಾಲುವೆಗಳಿಗೆ ಯಾವುದೇ ವಿಧವಾದ ಅಪಾಯ ಉಂಟಾಗುತ್ತಿರಲಿಲ್ಲ. ಪ್ರಾಚೀನ ಕಾಲದಲ್ಲಿ ನೀರ್ಗಂಟಿಗಳು ಈಜಿಕೊಂಡು ತೂಬಿಗೆ ಹೋಗುತ್ತಿದ್ದರು. ತೂಬಿಗೆ ಹಾಗೂ ಏರಿಯ ಕೆಳಪಾರ್ಶ್ವದಲ್ಲಿ ಇರುವ ಕಾಲುವೆಗೂ ನಡುವೆ ಏರಿಯ ಮುಖಾಂತರ ರಚಿಸಲಾದ ಸುರಂಗದ ಸಂಪರ್ಕ ಇರುತ್ತದೆ. ಹಳೆಯ ಕೆರೆಗಳಲ್ಲಿ ಸುರಂಗ ಕಲ್ಲು ಕಟ್ಟಡದ್ದಾಗಿರುತ್ತದೆ. ಈಗ ಜೀರ್ಣೋದ್ಧಾರ ಮಾಡುವ ಕೆರೆಗಳಲ್ಲಿ ಕಾಂಕ್ರೀಟು ಕೊಳಾಯಿಗಳ ಜೋಡಣೆ ಇರುತ್ತದೆ.

**ನೀರ್ಗಂಟಿಗಳು (ನೀರಗಂಟಿಗಳು)**

ನೀರ್ಗಂಟಿಗಳನ್ನು ಗಂಗಮತಸ್ಥರೆಂದು ಕರೆಯುತ್ತಾರೆ. ಕೆರೆಯನ್ನು ಕಾಯುವುದು, ನೀರು ಪೋಲಾಗದಂತೆ ಕಾಪಾಡುವುದು, ಅಗತ್ಯವಿದ್ದಾಗ ಗದ್ದೆಗಳಿಗೆ ನೀರು ಬಿಡುವುದು ಇವರ ಕರ್ತವ್ಯವಾಗಿರುತ್ತದೆ. ತಳವಾರರು ಊರಿನ ರಕ್ಷಣೆಯ ಕಾರ್ಯದಲ್ಲಿದ್ದರೆ, ನೀರ್ಗಂಟಿಯಾದವರು ಕೆರೆಯ ನೀರನ್ನು ರಕ್ಷಿಸುವ ಕಾರ್ಯದಲ್ಲಿ ನಿರತರಾಗಿರುತ್ತಿದ್ದರು. ಬೇಸಿಗೆ ಕಾಲದಲ್ಲಿ ನೀರನ್ನು ಉಳಿಸಲು ಎಚ್ಚರವಹಿಸುತ್ತಿದ್ದರು. ಹಳ್ಳಿಯ ರೈತರಿಗೆ ಅವರ ಬೆಳವಣಿಗೆ ಅಗತ್ಯವಾದ ನೀರನ್ನು ಹಂಚಿಕೆ ಮಾಡುವುದು ಅವನ ಕಾಯಕ. ನೀರು ಕಡಿಮೆಯಾದಾಗ, ನೀರನ್ನು ಕಳ್ಳತನದಲ್ಲಿ ವಿಲೇಮಾಡುತ್ತಿದ್ದ ಎಂಬ ಶಂಕೆ ಬಾರದಿರಲಿ ಎಂದು ಆತ ವ್ಯವಸ್ಥಾಪಕರಿಗೆ ಲೆಕ್ಕ ಒಪ್ಪಿಸುತ್ತಿದ್ದನು.[೪]

ಹಿಂದೆ ಗದ್ದೆಗಳಿಗೆ ನೀರನ್ನು ಹಂಚುವಾಗ ಕ್ರಮವಾಗಿ ಹಂಚುತ್ತಿದ್ದರು. ಒಂದು ಗದ್ದೆಗೆ ನೀರು ಪೂರೈಕೆಯಾಗುವ ತನಕ ಮತ್ತೊಂದು ಗದ್ದೆಯವರು ಆ ನೀರನ್ನು ಕದಿಯಬಾರದೆಂದು ಗದ್ದೆಯ ಒಡ್ಡಿಗೆ ಮುದ್ರೆ ಹಾಕುವ ಪದ್ಧತಿ ಇತ್ತು ತೋಟ ತಳವಾರ ನೀರ್ಗಂಟಿ ಆ ಮುದ್ರೆ ಕೋಲನ್ನು ತೆಗೆದುಕೊಂಡು ಹೋಗಿ ಮುದ್ರೆ ಹಾಕುವಂತೆ ನಿರ್ಬಂಧನೆ ಮಾಡಿದರು. ಈ ಕಾರಣದಿಂದ ತಳವಾರರು, ನೀರ್ಗಂಟಿಯವರು ಗ್ರಾಮ ಮತ್ತು ನೀರಿನ ರಕ್ಷಣೆಗಾಗಿ ಕಟ್ಟುನಿಟ್ಟಿನ ನಿಯಮಗಳನ್ನು ಪಾಲಿಸುತ್ತಿದ್ದರು ಇವರ ಕೆಲಸ ಕೆರೆಯನ್ನು ನೋಡಿಕೊಳ್ಳುವುದು ಹಾಗೂ ತೂಬುಗಳನ್ನು ಎತ್ತುವುದರ ಮೂಲಕ ಕಾಲುವೆಗಳಿಗೆ ನೀರು ಬಿಡುವುದು. ಈ ಸೇವೆಗಾಗಿ ಅವರಿಗೆ ಉತ್ತಮ ಭೂಮಿ ಉಂಬಳಿ ಇರುತ್ತಿತ್ತು.

ಕೆರೆಯ ನೀರು ಉಪಯೋಗಿಸಿಕೊಂಡು ಬೆಳೆದ ಬೆಳೆಯಲ್ಲಿ ಫಲಾನುಭವಿಗಳು ವರ್ಷದ ಕೊನೆಯಲ್ಲಿ ಅಂದರೆ ಸುಗ್ಗಿಯ ಕಾಲದಲ್ಲಿ ಹೊರೆಹುಲ್ಲು ಹಾಗೂ ಮೂರಾ ಭತ್ತವನ್ನೂ ಪಡೆಯುತ್ತಿದ್ದರು. ಹೊರೆ ಹುಲ್ಲು ಎಂದರೆ, ಅವನು ಹೊರುವಷ್ಟು ಹುಲ್ಲಿನ ಕಂತೆಗಳು ಎಂದರ್ಥ, ಮುರಾ ಭತ್ತ ಎಂದರೆ ಬೆಳೆದ ಭತ್ತದಲ್ಲಿ ಒಂದು ಪಾಲು ಎಂದು ತೋರುತ್ತದೆ

**ತೂಬುಗಳ ಮೇಲಿನ ಉಬ್ಬುಶಿಲ್ಪಗಳು**

ಬಯಕಾರ ರಾಮಪ್ಪನ ಕೆರೆಗಳಲ್ಲಿ ಸಾಮಾನ್ಯವಾಗಿ ಕೆರೆಯ ತೂಬುಗಳಲ್ಲಿ ಈ ಗಜಲಕ್ಷ್ಮಿ ಶಿಲ್ಪಗಳನ್ನು ಕಾಣುತ್ತೇವೆ. ಇವು ವಿಜಯನಗರ ಕಾಲಾವಧಿಯಲ್ಲಿ ಹೆಚ್ಚು ಕಾಣುತ್ತವೆ. ಈ ತೂಬುಗಳ ಮೇಲೆ ಗಜಲಕ್ಷ್ಮಿ ಮತ್ತು ಇತರ ದೇವರುಗಳಿಗೆ ಸಂಬಂಧಿಸಿದ ಉಬ್ಬುಶಿಲ್ಪಗಳು ಹಾಗೂ ಜಲಚರ ಪ್ರಾಣಿ ಮತ್ತು ಶಿಬಾರದ ಚಿತ್ರಣವಿರುವ ಉಬ್ಬುಶಿಲ್ಪಗಳನ್ನು ನೋಡಬಹುದು. ಅವುಗಳಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವು ಹೆಚ್ಚು ತೂಬುಗಳ ಮೇಲೆ ಸಾಮಾನ್ಯವಾಗಿ ಕಂಡುಬಂದಿವೆ. ಈ ಉಬ್ಬುಶಿಲ್ಪಗಳನ್ನು ಗಮನಿಸಿದಾಗ ಬಹುಶಃ ಸಮೃದ್ಧಿಯ ಸಂಕೇತವಾಗಿ ಕೆತ್ತಿರಬಹುದು. ಗಜಲಕ್ಷ್ಮಿ ಉಬ್ಬುಶಿಲ್ಪಗಳ ಪ್ರಾಚೀನತೆಯು ಶುಂಗರ ಕಾಲದಿಂದ ಕಂಡುಬಂದಿರುವುದಾಗಿ ಚುಡಾಮಣಿ ನಂದಾಗೋಪಾಲ್ ಅವರು 'ಗಜಲಕ್ಷ್ಮಿಯ ಸಾಂಕೇತಿಕ ವಿನ್ಯಾಸ ಒಂದು ಅಧ್ಯಯನ' ಎಂಬ ಲೇಖನದಲ್ಲಿ ವಿವರಿಸಿದ್ದಾರೆ.[೫]

**ಕೋಡಿಗಳು**

ಕೆರೆಯ ವಿವಿಧ ಭಾಗಗಳಲ್ಲಿ ಕೋಡಿಯು ಒಂದು. ಪ್ರತಿಯೊಂದು ಕೆರೆಯಲ್ಲಿಯೂ ತೂಬಿನ ಜೊತೆಗೆ ಕಟ್ಟಡದ ಕೋಡಿಯೂ ಇರುತ್ತಿತ್ತು. ಕೆರೆಯ ಗಾತ್ರವನ್ನು ಆಧರಿಸಿ ಮತ್ತು ಎರಡು ಕೋಡಿಗಳು ಕಂಡುಬರುತ್ತವೆ. ಇವುಗಳ ಮೂಲಕ ಕೆರೆಯಲ್ಲಿನ ಹೆಚ್ಚುವರಿ ನೀರು ಕೆಳಗಿನ ಇತರೆ

ಕೆರೆಗಳಿಗೆ ಹರಿದು ಹೋಗುತ್ತದೆ. ಕೋಡಿಗಳ ಅಗಲ ೩೦ ರಿಂದ ೩೦೦ ಅಡಿಗಳವರೆಗೂ ಇರುತ್ತಿತ್ತು. ಬಯಕಾರ ರಾಮಪ್ಪನ ಪೋತಲಕಟ್ಟೆ ಕೆರೆ. ತಿಮ್ಮಲಾಪುರ ಕೆರೆ ಚಿಕ್ಕಕೆರೆಯಾಗಿನಹಳ್ಳಿ ಕೆರೆ ಕೂಡ ಅಗಲ ನೂರು ಅಡಿಗಳಷ್ಟು ಇದೆ. ಕೋಡಿಗಳ ಕಟ್ಟಡವನ್ನು ಬಲವಾಗಿ ಕಟ್ಟದಿದ್ದರೆ ಕೋಡಿಯ ಮೇಲೆ ಹರಿಯುವ ನೀರಿನ ರಭಸಕ್ಕೆ ಎಲ್ಲವೂ ಕೊಚ್ಚಿಕೊಂಡು ಹೋಗುತ್ತವೆ. ಆದ್ದರಿಂದ ಕೋಡಿಗಳ ಸುತ್ತಮುತ್ತ ಸಿಗುವ ದೊಡ್ಡದೊಡ್ಡ ಆಕಾರದ ಬಂಡೆಕಲ್ಲುಗಳಿಂದ ಭದ್ರಗೊಳಿಸಿದ್ದಾರೆ. ಸಾಮನ್ಯವಾಗಿ ಎಲ್ಲಾ ಕೆರೆಗಳ ಕೋಡಿಗಳ ಆಕಾರ ಚಚ್ಚೌಕಾಕಾರವಾಗಿ ಕಂಡುಬಂದಿದೆ. ವಿಜಯನಗರದ ಕಾಲದಲ್ಲಿ ಕೆಲವು ತಜ್ಞರು ಕೋಡಿಯನ್ನು ಕಟ್ಟುವುದರಲ್ಲಿಯೇ ಪರಿಣಿತಿಯನ್ನು ಹೊಂದಿದ್ದರು ಎಂಬುದಾಗಿ ಒಂದು ಶಾಸನದಿಂದ ತಿಳಿಸುತ್ತದೆ.

**ಕಾಲುವೆಗಳ ವ್ಯವಸ್ಥೆ**

ಕೆರೆಯಲ್ಲಿ ಸಂಗ್ರಹವಾದ ನೀರನ್ನು ನಿಯಂತ್ರಿಸಲು ಅಚ್ಚುಕಟ್ಟು ಪ್ರದೇಶಕ್ಕೆ ಹಾಯಿಸುವ ಮಾರ್ಗಕ್ಕೆ ಕಾಲುವೆ ಎಂದು ಹೆಸರು. ಕಾಲುವೆಯು ಕೆರೆಯ ಅವಿಭಾಜ್ಯ ಅಂಗಗಳಲ್ಲಿ ಒಂದು. ಕೆರೆಯ ನೀರನ್ನು ಕಾಲುವೆಗಳ ಮೂಲಕ ಏರಿಯ ಕೆಳಭಾಗದಿಂದ ವ್ಯವಸಾಯ ಭೂಮಿಗೆ ಹಾಯಿಸುತ್ತಿದ್ದರು. ಕಾಲುವೆಗಳಿಗೆ ತೂಬುಗಳನ್ನು ಇರಿಸಿ ಕೆರೆಯ ನೀರನ್ನು ನಿಯಂತ್ರಿಸುತ್ತಿದ್ದರು. ಕೆರೆಗೆ ನೀರು ಬರಲು ಕಾಲುವೆಗಳನ್ನು ಏರಿಯ ಕೆಳಭಾಗದಲ್ಲಿ ನಿರ್ಮಿಸಲಾಗುತ್ತಿತ್ತು. ಇವುಗಳನ್ನು ಕಲ್ಲುಗಳಿಂದ ಕಟ್ಟಲಾಗಿದೆ. ಇತ್ತಿಚಿನ ದಿನಗಳಲ್ಲಿ ಸಿಮೆಂಟ್ ಕಟ್ಟಡದ ಕಾಲುವೆಗಳನ್ನು ನೋಡಬಹುದು.

ಒಂದು ಕೆರೆಗೆ ಒಂದು, ಎರಡು, ಮೂರು ಮತ್ತು ನಾಲ್ಕು ಕಾಲುವೆಗಳು ಸಹ ಇರುತ್ತಿದ್ದವು. ಕೆರೆಯಲ್ಲಿ ಮೇಲ್ಮಟ್ಟದ ಕಾಲುವೆ ಮತ್ತು ಕೆಳಮಟ್ಟದ ಕಾಲುವೆಗಳು ಇದ್ದವು. ಕೆರೆಯು ತುಂಬಿದಾಗ ಮೇಲ್ಮಟ್ಟದ ಕಾಲುವೆಯಿಂದ ನೀರನ್ನು ಹಾಯಿಸಲಾಗುತ್ತಿತ್ತು. ನೀರು ಕೆಳಮಟ್ಟಕ್ಕೆ ಬಂದಾಗ ಕೆಳಮಟ್ಟದ ಕಾಲುವೆಯಿಂದ ನೀರನ್ನು ಹಾಯಿಸುತ್ತಿದ್ದರು. ಈ ರೀತಿಯ ವ್ಯವಸ್ಥೆಯು ಇಂದಿಗೂ ಪ್ರಚಲಿತದಲ್ಲಿದೆ. ನೀರಾವರಿ ಕಾರ್ಯಗಳಿಗಾಗಿ ನಿರ್ಮಿಸಲಾದ ಕೆರೆ ಮತ್ತು ಇತರ ಮೂಲಗಳಿಂದ ನೀರನ್ನೂ ಹರಿಸಲು ಕಾಲುವೆಗಳನ್ನು ರಕ್ಷಿಸುವುದು ಪ್ರಮುಖ ಕೆಲಸವಾಗಿದೆ. ಏಕೆಂದರೆ ಈ ಕಾಲುವೆಗಳು ಇಲ್ಲದೇ ಹೋದಲ್ಲಿ ನೀರಾವರಿ ವ್ಯವಸ್ಥೆಯೇ ಇಲ್ಲದಂತಾಗುತ್ತದೆ. ನೀರನ್ನು ಸಂಗ್ರಹಿಸುವ ಮತ್ತು ಅದರ ಸದುಪಯೋಗಕ್ಕೆ ಕಾಲುವೆಗಳ ನಿರ್ಮಾಣ ಕಾರ್ಯಗಳನ್ನು ಮಾಡುತ್ತಿದ್ದರು. ಪೋತಲಕಟ್ಟೆ ಕೆರೆಗೆ ಸಂಬಂಧಿಸಿದಂತೆ ಅಲ್ಲಿನ ಕಾಲುವೆಗಳ ವ್ಯವಸ್ಥೆವಾಗಿ ನಿರ್ಮಾಣ ಮಾಡಿದ್ದಾರೆ.

**ಕೆರೆಗಳ ನಿರ್ವಹಣೆ**

ಕೆರೆಗಳ ನಿರ್ಮಾಣದ ಉದ್ದೇಶ ಸಫಲವಾಗಬೇಕಾದರೆ ವ್ಯವಸ್ಥಿತವಾದ ನಿರ್ವಹಣೆ ಅತ್ಯಗತ್ಯ. ಈ ಕಾರ್ಯಕ್ಕಾಗಿ ಕೆಳಗಿನ ಅಧಿಕಾರಿಗಳ ವರ್ಗ ಇರುವುದನ್ನು ಗಮನಿಸಬಹುದು.

ಶಾನುಭೋಗ – ಲೆಕ್ಕಿಗ

ಗೌಡ – ಮುಖ್ಯಸ್ಥ

ಕಮ್ಮಾರ – ಕಬ್ಬಿಣದ ಕೆಲಸಗಾರ

ಬಡಗಿ – ಮರಗೆಲಸದವನು

ಅಗಸ _ ಮಡಿವಾಳ

ಪಂಚಾಂಗಿ – ಪಂಚಾಂಗ ಹೇಳುವವನು

ನಾಯಿಂದ – ಕ್ಷೌರಿಕ

ಮಾದಿಗ – ಚಪ್ಪಲಿ ಹೊಲಿಯುವವನು

ಅಕ್ಕಸಾಲಿ _ ಚಿನ್ನ, ಬೆಳ್ಳಿ ಕೆಲಸದವನು

ನೀರುಗಂಟಿ – ಕೆರೆ ಕಾವಲಿನಾಳು

ತಳಾರಿ – ಹಳ್ಳಿ ಕಾವಲಿನಾಳು

ಕುಂಬಾರ – ಮಡಿಕೆ ಮಾಡುವವನು

ಮೇಲಿನವರು ಗ್ರಾಮ ಸೇವಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅವರ ಅಧಿಕಾರ ವಂಶಪಾರಂಪರ್ಯವಾಗಿ ತಂದೆಯಿಂದ ಮಗನಿಗೆ ಹೋಗುತ್ತಿತ್ತು. ತಮಗೆ ತೊಂದರೆ ಉಂಟಾದಾಗ ತಮ್ಮ ಹುದ್ದೆಯನ್ನು ತ್ಯಜಿಸುವ ಇಲ್ಲವೆ ಅಡವಿಡುವ ಅಧಿಕಾರವಿತ್ತು. ಅವರಿಗೆ ಗ್ರಾಮದ ರೈತರು ತಾವು ಬೆಳೆದ ಬೆಳೆಯಲ್ಲಿ ಒಂದು ಪಾಲನ್ನು ಕೊಡುತ್ತಿದ್ದರು. ಕೆಲವು ಸಂದರ್ಭದಲ್ಲಿ ಅವರಿಗೆ ಮಾನ್ಯವಾದ ಭೂಮಿಯೂ ಇರುತ್ತಿತ್ತು. ನಿರ್ವಹಣೆಗೆ ಸಂಬಂಧಿಸಿದಂತೆ ಮುಖ್ಯವಾಗಿ ರಾಜನು ಇವರ ಮೇಲಾಧಿಕಾರಿಯಾಗಿದ್ದನು. ಸ್ವಾತಂತ್ರ್ಯಪೂರ್ವದಲ್ಲಿಯ ಆಡಳಿತದಲ್ಲಿ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದನು.

ನೀರಾವರಿ ವ್ಯವಸ್ಥೆಯು ಆತನ ಕೈ ಸೇರಿದ್ದರೂ ಕೆರೆಗಳ ನಿರ್ಮಾಣ, ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಮಂತ್ರಿಗಳು, ಸಂಧಿವಿಗ್ರಹಿಗಳು, ಊರಗೌಡರು, ಜಲಸೂತ್ರಧಾರರು, ಶಾನುಬೋಗರು, ನೀರ್ಗಂಟಿಗಳು, ತಳವಾರರು, ಗ್ರಾಮಪಂಚಾಯಿತಿಯ ಪಂಚರು, ಸ್ಥಳೀಯ

ಸಂಘಸಂಸ್ಥೆಗಳು ಮತ್ತು ಶ್ರೀಸಾಮಾನ್ಯರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಅಧಿಕಾರ ವರ್ಗದವರು ಕೇವಲ ಕೆರೆಗಳನ್ನು ಕಟ್ಟುವಂತೆ ಹೇಳುತ್ತಿದ್ದರು. ಅವುಗಳನ್ನು ಕಟ್ಟುವವರು ಬೇರೆ ಜನಾಂಗದವರಾಗಿರುತ್ತಿದ್ದರು. ಅಂತೆಯೇ ಪ್ರತಿಯೊಂದು ಪ್ರದೇಶದಲ್ಲಿಯೂ ಕೆರೆಯನ್ನು ಕಟ್ಟುವ ಮಣ್ಣುವಡ್ಡರು, ಕುಶಲಿಗಳು ಆದ ಕಸಬುದಾರ ಅನುಭವಿಗಳಿದ್ದರು. ಕುಶಲರಲ್ಲದ ಕೂಲಿಗಳನ್ನು ಮಣ್ಣುಕೆಲಸಕ್ಕೆ ಕಲ್ಲುಕೆಲಸಗಾರರನ್ನು ತೂಬು ರಚನೆಗೂ ನೇಮಿಸಿಕೊಂಡು ಕೆರೆಗಳನ್ನು ಕಟ್ಟಲಾಗುತ್ತಿತ್ತು. ಎಂದು ಶಾಸನಗಳಿಂದ ತಿಳಿದು ಬರುತ್ತದೆ.[೬]

ಕೆಲವೊಮ್ಮೆ ರಾಜನು ತಾನೇ ಸ್ವತಃ ಕೊಂಡುಕೊಂಡಿದ್ದ ಭೂಮಿಯನ್ನು ದಾನ ಮಾಡುತ್ತಿದ್ದನು. ಕೆರೆಯನ್ನು ಕಟ್ಟಿಸುವುದು ಎಷ್ಟು ಮುಖ್ಯವಾಗಿತ್ತೊ ಸಂರಕ್ಷಿಸುವುದು ಅಷ್ಟೇ ಮುಖ್ಯವಾಗಿತ್ತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೆರೆ ಜತೆ ಬೇಸಾಯ ಮಾಡುವ ವ್ಯಕ್ತಿಗಳು ಅಥವಾ ಯಾವುದೇ ರೀತಿಯ ಕಂದಾಯವೂ ಇಲ್ಲದೆ ಭೂಮಿಯನ್ನು ಅನುಭವಿಸಲು ಅನುಮತಿ ಪಡೆದ ವ್ಯಕ್ತಿಗಳು, ಕೆರೆಯನ್ನು ಸಂರಕ್ಷಿಸಬೇಕು. ಇಲ್ಲವಾದರೆ ಅವರಿಗೆ ನಷ್ಟದ ಎರಡಷ್ಟು ಜುಲ್ಮಾನೆಯ ಶಿಕ್ಷೆ ವಿಧಿಸುವಂತೆ ಹೇಳಿದೆ. ಕೆರೆ ಅಚ್ಚುಕಟ್ಟು ಭೂಮಿಯ ಆದಾಯವನ್ನು ದೇವಾಲಯ ಮತ್ತು ಕೆರೆಯ ಸಂರಕ್ಷಣೆಯ ಕೈಂಕರ್ಯಗಳಿಗೆ ಬಳಸಲಾಗುತ್ತಿತ್ತು.

ಕೆಲವು ವೇಳೆ ದೇವಾಲಯಗಳಿಗೆ ಬಿಟ್ಟ ಧಾನದತ್ತಿ ಮತ್ತು ಧನವನ್ನು ಕೆರೆಯ ದುರಸ್ತಿ ಕಾರ್ಯಗಳಲ್ಲಿ ಬಳಸಲಾಗುತ್ತಿತ್ತೆಂಬುದು ಶಾಸನೋಕ್ತ ವಿಷಯ.

**ಕೆರೆ ನಿರ್ಮಿಸಲು ಪಾಲಿಸಬೇಕಾದ ನಿಯಮಗಳು**

ಕ್ರಿ.ಶ. ೧೩೬೯ ರ ಪೊರುಮಾಮಿಲ್ಲ ಶಾಸನವು ಒಂದು ಕೆರೆಯನ್ನು ಕಟ್ಟಲು ಬೇಕಾದ ಹನ್ನೆರಡು ಅಗತ್ಯ ಅಂಶಗಳನ್ನು ಹಾಗೂ ಮಾಡಬಾರದ ಆರು ಬಗೆಯ ದೋಷಗಳನ್ನು ಹೇಳಿದೆ. ಕೆರೆ ನಿರ್ಮಾಣಕ್ಕೆ ಇರಬೇಕಾದ ಹನ್ನೆರಡು ಅಗತ್ಯಗಳು:

೧. ಧರ್ಮಸಕ್ತನೂ, ಧನವಂತನೂ, ಸುಖವಾಗಿರುವವನೂ, ಕೀರ್ತಿಯನ್ನು ಶಾಶ್ವತವಾಗಿ ಪಡೆಯುವ ಅಭಿಲಾಷೆ

ಇರುವ ರಾಜನು ಕೆರೆ ನಿರ್ಮಾರ್ಣದಲ್ಲಿ ತೊಡಗಬೇಕು.

೨. ಜಲಶಾಸ್ತ್ರದಲ್ಲಿ ಪಾರಂಗತನಾದ ಬ್ರಾಹ್ಮಣನಿರಬೇಕು.

೩. ಗಟ್ಟಿಯಾದ ಜೇಡಿಮಣ್ಣಿನಿಂದ ಕೂಡಿದ ನೆಲದಲ್ಲಿ ಕೆರೆ ನಿರ್ಮಾಣವಾಗಬೇಕು.

೪. ಸಿಹಿ ನೀರನ್ನು ತರುವ ನದಿಯಿಂದ ಸುಮಾರು ಮೂರು ಯೋಜನೆಗಳಷ್ಟ ದೂರದಲ್ಲಿರಬೇಕು.

ಸಂಘಸಂಸ್ಥೆಗಳು ಮತ್ತು ಶ್ರೀಸಾಮಾನ್ಯರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಅಧಿಕಾರ ವರ್ಗದವರು ಕೇವಲ ಕೆರೆಗಳನ್ನು ಕಟ್ಟುವಂತೆ ಹೇಳುತ್ತಿದ್ದರು. ಅವುಗಳನ್ನು ಕಟ್ಟುವವರು ಬೇರೆ ಜನಾಂಗದವರಾಗಿರುತ್ತಿದ್ದರು. ಅಂತೆಯೇ ಪ್ರತಿಯೊಂದು ಪ್ರದೇಶದಲ್ಲಿಯೂ ಕೆರೆಯನ್ನು ಕಟ್ಟುವ ಮಣ್ಣುವಡ್ಡರು, ಕುಶಲಿಗಳು ಆದ ಕಸಬುದಾರ ಅನುಭವಿಗಳಿದ್ದರು. ಕುಶಲರಲ್ಲದ ಕೂಲಿಗಳನ್ನು ಮಣ್ಣುಕೆಲಸಕ್ಕೆ ಕಲ್ಲುಕೆಲಸಗಾರರನ್ನು ತೂಬು ರಚನೆಗೂ ನೇಮಿಸಿಕೊಂಡು ಕೆರೆಗಳನ್ನು ಕಟ್ಟಲಾಗುತ್ತಿತ್ತು. ಎಂದು ಶಾಸನಗಳಿಂದ ತಿಳಿದು ಬರುತ್ತದೆ.[೬]

ಕೆಲವೊಮ್ಮೆ ರಾಜನು ತಾನೇ ಸ್ವತಃ ಕೊಂಡುಕೊಂಡಿದ್ದ ಭೂಮಿಯನ್ನು ದಾನ ಮಾಡುತ್ತಿದ್ದನು. ಕೆರೆಯನ್ನು ಕಟ್ಟಿಸುವುದು ಎಷ್ಟು ಮುಖ್ಯವಾಗಿತ್ತೊ ಸಂರಕ್ಷಿಸುವುದು ಅಷ್ಟೇ ಮುಖ್ಯವಾಗಿತ್ತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೆರೆ ಜತೆ ಬೇಸಾಯ ಮಾಡುವ ವ್ಯಕ್ತಿಗಳು ಅಥವಾ ಯಾವುದೇ ರೀತಿಯ ಕಂದಾಯವೂ ಇಲ್ಲದೆ ಭೂಮಿಯನ್ನು ಅನುಭವಿಸಲು ಅನುಮತಿ ಪಡೆದ ವ್ಯಕ್ತಿಗಳು, ಕೆರೆಯನ್ನು ಸಂರಕ್ಷಿಸಬೇಕು. ಇಲ್ಲವಾದರೆ ಅವರಿಗೆ ನಷ್ಟದ ಎರಡಷ್ಟು ಜುಲ್ಮಾನೆಯ ಶಿಕ್ಷೆ ವಿಧಿಸುವಂತೆ ಹೇಳಿದೆ. ಕೆರೆ ಅಚ್ಚುಕಟ್ಟು ಭೂಮಿಯ ಆದಾಯವನ್ನು ದೇವಾಲಯ ಮತ್ತು ಕೆರೆಯ ಸಂರಕ್ಷಣೆಯ ಕೈಂಕರ್ಯಗಳಿಗೆ ಬಳಸಲಾಗುತ್ತಿತ್ತು.

ಕೆಲವು ವೇಳೆ ದೇವಾಲಯಗಳಿಗೆ ಬಿಟ್ಟ ಧಾನದತ್ತಿ ಮತ್ತು ಧನವನ್ನು ಕೆರೆಯ ದುರಸ್ತಿ ಕಾರ್ಯಗಳಲ್ಲಿ ಬಳಸಲಾಗುತ್ತಿತ್ತೆಂಬುದು ಶಾಸನೋಕ್ತ ವಿಷಯ.

**ಕೆರೆ ನಿರ್ಮಿಸಲು ಪಾಲಿಸಬೇಕಾದ ನಿಯಮಗಳು**

ಕ್ರಿ.ಶ. ೧೩೬೯ ರ ಪೊರುಮಾಮಿಲ್ಲ ಶಾಸನವು ಒಂದು ಕೆರೆಯನ್ನು ಕಟ್ಟಲು ಬೇಕಾದ ಹನ್ನೆರಡು ಅಗತ್ಯ ಅಂಶಗಳನ್ನು ಹಾಗೂ ಮಾಡಬಾರದ ಆರು ಬಗೆಯ ದೋಷಗಳನ್ನು ಹೇಳಿದೆ. ಕೆರೆ ನಿರ್ಮಾಣಕ್ಕೆ ಇರಬೇಕಾದ ಹನ್ನೆರಡು ಅಗತ್ಯಗಳು:

೧. ಧರ್ಮಸಕ್ತನೂ, ಧನವಂತನೂ, ಸುಖವಾಗಿರುವವನೂ, ಕೀರ್ತಿಯನ್ನು ಶಾಶ್ವತವಾಗಿ ಪಡೆಯುವ ಅಭಿಲಾಷೆ

ಇರುವ ರಾಜನು ಕೆರೆ ನಿರ್ಮಾರ್ಣದಲ್ಲಿ ತೊಡಗಬೇಕು.

೨. ಜಲಶಾಸ್ತ್ರದಲ್ಲಿ ಪಾರಂಗತನಾದ ಬ್ರಾಹ್ಮಣನಿರಬೇಕು.

೩. ಗಟ್ಟಿಯಾದ ಜೇಡಿಮಣ್ಣಿನಿಂದ ಕೂಡಿದ ನೆಲದಲ್ಲಿ ಕೆರೆ ನಿರ್ಮಾಣವಾಗಬೇಕು.

೪. ಸಿಹಿ ನೀರನ್ನು ತರುವ ನದಿಯಿಂದ ಸುಮಾರು ಮೂರು ಯೋಜನೆಗಳಷ್ಟ ದೂರದಲ್ಲಿರಬೇಕು.

೫. ಬೆಟ್ಟಗಳ ನಡುವಿನ ಪ್ರದೇಶದಲ್ಲಿ ಬಿಗಿಯಾದ ಕಲ್ಲುಗೋಡೆ(ಏರಿ)ಯನ್ನು ಕಟ್ಟಬೇಕು.

೬. ಕೆರೆಯ ಸಮೀಪದಲ್ಲಿ ಫಲ ಕೊಡುವ ಭೂಮಿಯಿರಬೇಕು.

೭. ಉದ್ದ ಮತ್ತು ಸಮಾನಾದ ಕಲ್ಲುಗಳು ದೊರೆಯುವ ಕಲ್ಲುಗಣಿಗಳಿರಬೇಕು.

೮. ಕೆರೆಯ ಅಂಗಳ ವಿಸ್ತಾರವಾಗಿಯೂ, ಆಳವಾಗಿಯೂ ಇರಬೇಕು.

೯. ಕೆರೆಯ ಅಚ್ಚುಕಟ್ಟು ಪ್ರದೇಶವು ಫಲವತ್ತಾಗಿರಬೇಕು. ಅಲ್ಲಿ ಹಣ್ಣು, ಹಂಪಲುಗಳ ಮರಗಳಿರಬೇಕು.

೧೦. ತೂಬುಗಳು ಕೆರೆಯ ನೀರಿನ ಇತ್ತಡವನ್ನು ತಡೆಯುವಷ್ಟು ಭದ್ರವಾಗಿರಬೇಕು.

೧೧. ಕೆರೆ ನಿರ್ಮಾಣದಲ್ಲಿ ಕುಶಲರಾದ ಕೆಲಸಗಾರರಿರಬೇಕು.

**ಸಂಭವಿಸದಂತೆ ಮುನ್ನೆಚ್ಚರಿಕೆಗೆ ಇರಬೇಕಾದ ಕ್ರಮಗಳು**

೧. ಕೆರೆಯಲ್ಲಿ ನೀರು ಜಿನಗಬಾರದು.

೨. ಕೆರೆಯ ಮಣ್ಣು ಲವಣಾಂಶದಿಂದ ಕೂಡಿರಬಾರದು.

೩. ಕೆರೆಯಂಗಳದ ಮಧ್ಯೆದಲ್ಲಿ ದಿಬ್ಬ(ಕೂರ್ಮ) ಇರಬಾರದು.

೪. ಎರಡು ರಾಜ್ಯಗಳ ಗಡಿಯಲ್ಲಿ ಕೆರೆ ನಿರ್ಮಿಸಬಾರದು.

೫. ಕೆರೆಯಲ್ಲಿ ಕಡಿಮೆ ನೀರು ಮತ್ತು ಅಚ್ಚುಕಟ್ಟ ಹೆಚ್ಚು ಇರಬಾರದು.

೬. ಸ್ವಲ್ಪ ಭೂಮಿ(ಜಮೀನು)ಯಿದ್ದು ಅಧಿಕ ನೀರು ಬರುವಂತಹ ಸ್ಥಳವನ್ನು ಆರಿಸಬಾರದು.

**ಕೆರೆ ಸಂರಕ್ಷಣೆಯ ಸಾಮಾನ್ಯ ಕ್ರಮಗಳು**

- ಕೆರೆ ಮತ್ತು ಕಾಲುವೆಗಳಲ್ಲಿರುವ ಹೂಳನ್ನು ಕಾಲ ಕಾಲಕ್ಕೆ ತೆಗೆಸುವುದು.
- ಕೆರೆಯ ಏರಿ ಮಳೆ ಅಥವಾ ಇನ್ನಿತರ ಕಾರಣದಿಂದ ಹಾನಿಗೊಂಡಿದ್ದರೆ ಸರಿಪಡಿಸುವುದು.
- ತೂಬು ಮತ್ತು ಕೋಡಿ ಹಾನಿಗೊಂಡರೆ ಕಾಲಕಾಲಕ್ಕೆ ದುರಸ್ತಿ ಮಾಡುವುದು.
- ಕೆರೆಯಂಗಳ ಒತ್ತುವರಿಯಾಗದಂತೆ ತಡೆಯುವುದು.
- ಕೆರೆಯಂಗಳಕ್ಕೆ ಹೂಳುಬರದಂತೆ ರಕ್ಷಿಸುವುದು.
- ಕೆರೆಗೆ ಅವಶ್ಯವಿದ್ದಲ್ಲಿ ಮೆಟ್ಟಿಲುಗಳನ್ನು ವಿವಾದವನ್ನು ಬಗೆಹರಿಸುವುದು. ಇವು ಒಂದು ಉತ್ತುಮ ಕೆರೆ ನಿರ್ಮಿಸಲು ಪಾಲಿಸಬೇಕಾದ ನಿಯಮಗಳಾಗಿವೆ.[೭]

**ಕೆರೆ–ತೆರಿಗೆ ಪದ್ಧತಿ**

ಕೆರೆಯ ನಿರ್ಮಾಣ ಮತ್ತು ನಿರ್ವಹಣೆಯ ಕಾರ್ಯದಲ್ಲಿ ತೊಡಗುವವರಿಗೆ ವಿವಿಧ ರೂಪದ ಕೊಡುಗೆ ಹಾಗೂ ಕಂದಾಯದಲ್ಲಿ ರಿಯಾಯ್ತಿ ನೀಡುವ ವ್ಯವಸ್ಥೆಯಿದ್ದಿತು. ಇವರಿಗೆ ಧನ, ಧಾನ್ಯ,

ದಾನ, ದತ್ತಿ ಮತ್ತು ಭೂಮಿಯನ್ನು ಕೊಡುಗೆಯಾಗಿ ನೀಡುತ್ತಿದ್ದರು. ಇದರ ಮೂಲಕ ಜನರನ್ನು ಪ್ರಾಜಾಪಿತಾತ್ಮಕ ಕಾರ್ಯದಲ್ಲಿ ತೊಡಗಿಸಿ, ಕೆರೆ ಸುಸ್ಥಿತಿಯಲ್ಲಿಡುವಲ್ಲಿ ಶಾಸನಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

**ಕೆರೆಬಂಡಿ**

ಸಾಮಾನ್ಯವಾಗಿ ಕೆರೆ ಅಂಗಳದಲ್ಲಿ ರಭಸದಿಂದ ನೀರು ಹರಿದು ಬರುವಾಗ ಮಣ್ಣು ಶೇಖರವಾಗುವುದು. ಈ ಮಣ್ಣು ಕೆರೆಯ ತಳದಲ್ಲಿ ಜೇಡಿಮಣ್ಣು ಆಗಿ ನೀರಿನ ಮಟ್ಟವನ್ನು ಮೇಲೀರುವಂತೆ ಮಾಡುತ್ತದೆ. ಬೇಸಿಗೆಯಲ್ಲಿ ಕೆರೆಯ ಅಂಗಳದಿಂದ ಮಣ್ಣನ್ನು ಹೊರಕ್ಕೆ ತೆಗೆದು ಹಾಕದಿದ್ದರೆ ಹೂಳು ತುಂಬಿ ನೀರು ನಿಲ್ಲಲ್ಲು ಸ್ಥಳವೇ ಇಲ್ಲದಂತಾಗುತ್ತದೆ. ಹಾಗಾಗಿ ಕಾಲ ಕಾಲಕ್ಕೆ ಹೂಳು ತೆಗೆಸಬೇಕು. ಈ ಕಾರ್ಯಗಳಿಗೆ ಎತ್ತಿನ ಗಾಡಿಗಳನ್ನು ಬಳಸುತ್ತಿದ್ದರು. ಅದಕ್ಕೆಂದು ಕೆರೆಬಂಡಿಗಳನ್ನು ಮಾನ್ಯವಾಗಿ ನೀಡಿರುವುದು ಶಾಸನಗಳಲ್ಲಿ ಉಕ್ತವಾಗಿದೆ. ಎತ್ತುಗಳು, ಎಮ್ಮೆಗಳು ಬಂಡಿಯನ್ನು ನಡೆಸುವವರ ಜೀವಿತಕ್ಕೆ ಅವಶ್ಯಕವಾದ ಹಣ ಮತ್ತು ಭೂಮಿಯನ್ನು ನೀಡುತ್ತಿದ್ದರು. ಇವುಗಳ ಜೊತೆಗೆ ಹೂಳೆತ್ತುವ ಸಾಮಗ್ರಿಗಳಾದ ಗಾಡಿ, ಎಣ್ಣೆ, ಮರ, ಮುಟ್ಟು ಮತ್ತು ಕಬ್ಬಿಣದ ವಸ್ತುಗಳನ್ನು ಒಳಗೊಂಡಿರುವುದು ಗಮನಾರ್ಹ ಸಂಗತಿ.

**ಕೆರೆ ರಕ್ಷಣೆಯ ಕಾಯ್ದೆಗಳು**

ಈ ಕಾಯ್ದೆಗಳು ಕೆರೆಗಳು ನಾಶವಾಗದಂತೆ ರಕ್ಷಣೆ ಮಾಡುವುದಕ್ಕೆ ಜನರು ಪಾಲಿಸಬೇಕಾದ ಕಾನೂನುಗಳಾಗಿವೆ.

- ೧೯೬೫ರ ನೀರಾವರಿ ಕಾಯಿದೆಯು ಜಾರಿಗೆ ಬಂದಿರುವ. ಈ ಕಾಯ್ದೆಯಲ್ಲಿ ನೀರಾವರಿ ಕೆಲಸಗಳ ರಚನೆ, ನಿರ್ವಹಣೆ, ನಿರ್ಮಾಣ, ವಿತರಣೆ, ತುರ್ತುಪರಿಸ್ಥಿತಿಯಲ್ಲಿ ಕೂಲಿಯಾಳುಗಳನ್ನು ಪಡೆಯುವ ವಿಷಯಗಳಿವೆ.
- ಸಂವಿಧಾನದ ೫೧(ಎ) ವಿಧಿಯು ಪ್ರತಿ ಪ್ರಜೆಯೂ ಕಾಡು, ಕೆರೆ, ನದಿ, ವನ್ಯಜೀವಿಗಳನ್ನು ರಕ್ಷಿಸಬೇಕು ಎಂದು ಹೇಳುತ್ತದೆ.
- ನಿರ್ದೇಶನ ಸೂತ್ರದ ೪೫ (ಎ) ವಿಧಿಯೂ ಕೂಡ ಇದನ್ನೇ ಹೇಳುತ್ತದೆ.
- ೧೯೭೪ರ ನೀರು ಮಾಲಿನ್ಯ ನಿಯಂತ್ರಣ ಕಾಯ್ದೆ
- ೧೯೭೭ರ ನೀರು ಮಾಲಿನ್ಯ ನಿಯಂತ್ರಣ ಸಸ್ ಕಾಯ್ದೆ.

* ೧೯೮೦ರ ಅರಣ್ಯ ಸಂರಕ್ಷಣಾ ಕಾಯ್ದೆ.
* ೧೯೮೬ರ ಪರಿಸರ ಸಂರಕ್ಷಣಾ ಕಾಯ್ದೆ
* ೨೦೦೧ರ ರಾಷ್ಟ್ರೀಯ ಕೆರೆ ಸಂರಕ್ಷಣಾ ಕಾಯ್ದೆ.
* ೨೦೦೨ರಲ್ಲಿ ಬೆಂಗಳೂರು ಹಾಗೂ ಇತರೆ ನಗರ ಪ್ರದೇಶಗಳಿಗೆ ಸಂಬಂಧಿಸಿದಂತೆ ಕೆರೆ ಅಭಿವೃದ್ಧಿ ಪ್ರಾಧಿಕಾರ ಕಾಯ್ದೆಯನ್ನು ಜಾರಿಗೊಳಿಸಲಾಗಿದೆ.[೮]

ಈ ಕಾಯ್ದೆಯ ಪ್ರಕಾರ ಕೆರೆಯ ಒತ್ತುವರಿ ಮಾಡುವುದು ಮತ್ತು ಅನಧಿಕೃತವಾಗಿ ಕೆರೆ ನೀರಿನ ಬಳಕೆಯನ್ನು ನಿಷೇಧಿಸಿದೆ. ಕೆರೆಯ ಹೊರಗಿನ ಸರಹದ್ದಿನಿಂದ ೩೦ ಮೀಟರ್ ಒಳಗೆ ಯಾವುದೇ ವಾಣಿಜ್ಯ ಚಟುವಟಿಕೆ ನಡೆಸುವಂತಿಲ್ಲ. ಮನೆ ಕಟ್ಟುವಂತಿಲ್ಲ. ಕೆರೆಗಳಿಗೆ ತ್ಯಾಜ್ಯವಸ್ತುಗಳನ್ನು ಸುರಿಯುವಂತಿಲ್ಲ. ಕೆರೆ ಪ್ರದೇಶದಲ್ಲಿ ಒಡ್ಡು, ರಸ್ತೆ, ಸೇತುವೆ ನಿರ್ಮಾಣ ಮಾಡುವಂತಿಲ್ಲ. ಇವುಗಳನ್ನು ಉಲ್ಲಂಘಿಸಿದರೆ ೬ ತಿಂಗಳಿನಿಂದ ೨ ವರ್ಷದವರೆಗೆ ಜೈಲುಶಿಕ್ಷೆ ವಿಧಿಸಬಹುದು. ೧೦ ಸಾವಿರದಿಂದ ೨೦ ಸಾವಿರದವರೆಗೆ ದಂಡ ವಿಧಿಸಬಹುದು. ಒತ್ತುವರಿ ತೆರುವುಗೊಳಿಸಲು ಬರುವ ಅಧಿಕಾರಿಗಳಿಗೆ ಅಡ್ಡಿಯನ್ನುಂಟು ಮಾಡಿದರೆ ಶಿಕ್ಷೆ ವಿಧಿಸಬಹುದು. ಒತ್ತುವರಿ ತಡೆಯುವಲ್ಲಿ ವಿಫಲನಾಗುವ ನೌಕರರಿಗೂ ದಂಡ ವಿಧಿಸಲು ಅವಕಾಶವಿದೆ. ಕೆರೆಯ ಸಂರಕ್ಷಣೆಯಲ್ಲಿ ಸರ್ಕಾರ ಮತ್ತು ಇಲಾಖೆಯ ಪಾತ್ರ ಮಹತ್ವದ್ದಾಗಿದೆ.

## ಬಯಕಾರ ರಾಮಪ್ಪನ ಕೆರೆಗಳು

### ೧. ಪೆದಲಕ್ಕ ಸಮುದ್ರಂ

| | | | |
|---|---|---|---|
| ಕೆರೆಯ ಸ್ಥಳ | : ಚಿಕ್ಕಕೆರೆಯಾಗಿಹಳ್ಳಿ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಸಂಡೂರು | ದಿಕ್ಕು | : ಪಶ್ಚಿಮ |
| ಜಿಲ್ಲೆ | : ಬಳ್ಳಾರಿ | ಕಾಲ | : ಕ್ರಿ.ಶ. ೧೫೫೯ ಆಗಸ್ಟ್ ೨೬ |

ಈ ಕೆರೆಯು ಬಯಕಾರ ರಾಮಪ್ಪನ ಕಾಲಾವಧಿಯಲ್ಲಿ ನಿರ್ಮಾಣಗೊಂಡಿದೆ. ಇದು ಉತ್ತಮ ಸ್ಥಿತಿಯಲ್ಲಿದ್ದು. ನೀರಾವರಿಗೆ ಯೋಗ್ಯವಾಗಿದೆ. ಈ ಕೆರೆಯನ್ನು ಬಯಕಾರ ರಾಮಪ್ಪ ತನ್ನ ತಾಯಿ ಹಿರಿಯ-ಲಕ್ಕರಸಮ್ಮನ ಹೆಸರಿನಲ್ಲಿ ಹಿರಿಯ-ಲಕ್ಕಸಮುದ್ರ ಕೆರೆಯನ್ನು ಕಟ್ಟಿಸಿದನು ಎಂದು ಇಲ್ಲಿನ ಶಾಸನ ತಿಳಿಸುತ್ತದೆ. ಮುಖ್ಯವಾಗಿ ಈ ಶಾಸನದಲ್ಲಿ ಬಯಕಾರ ರಾಮಪ್ಪಯ್ಯನಿಗೆ ಸಂಬಂಧಿಸಿದಂತೆ ಅನೇಕ ಮಾಹಿತಿ ಇದರಲ್ಲಿದೆ. ಪೆದ್ದ-ತಿಮ್ಮಯ ಮತ್ತು ಲಕ್ಕಾಂಬಿಕ ಮಗ, ರಾಮಮಂತ್ರಿ ಮತ್ತು

ತೆಲಗಮಾಂಬರ ಮೊಮ್ಮಗ ಮತ್ತು ಸಿಂಗಯ್ಯನ ಮಗ ಭಾವಯ-ಮಂತ್ರಿಯ ಮರಿಮಗನಾದ ರಾಮಯ್ಯನು ಕೊಂಡುವೀಡು ವಿಭಾಗದ ಮುಖ್ಯಸ್ಥನಾಗಿದ್ದನೆಂದು ತಿಳಿದು ಬರುತ್ತದೆ.

ಈತನು ತಿಮ್ಮಾಪುರ, ಚಿನ್ನ-ತಿಮ್ಮಾಪುರ ಮತ್ತು ಮಗಿಮಾವಿನಹಳ್ಳಿ ಅಗ್ರಹಾರಗಳನ್ನು ಕಟ್ಟಿಸಿದನು. ಪೆದ್ದ-ತಿಮ್ಮಾಪುರದಲ್ಲಿ ದೇವಾಸ್ಥಾನಗಳನ್ನು ಕಟ್ಟಿಸಿ ಗೋಪಿನಾಥ, ಬಾಚೇಶ್ವರ, ಕೃಷ್ಣೇಶ, ಅಮ್ಮೇಶ, ಮಲ್ಲಿಕಾರ್ಜುನ, ವೀರಭದ್ರ ಮತ್ತು ವಿಶ್ವನಾಥ ದೇವರನ್ನು ಪ್ರತಿಷ್ಠಾಪಿಸಿ ಈ ದೇವರಿಗೆ ಹೊಳಗುಂದಿ ಗ್ರಾಮವನ್ನು ದಾನ ನೀಡಿದನು ತನ್ನ ಮಗಳು ಅಚ್ಚುತಮ್ಮನ ಸಮುದ್ರ, ಬಾಚ ಸಮುದ್ರ, ರಾಮ ಸಮುದ್ರ, ಅಕ್ಕ ಸಮುದ್ರ, ಕಾಮ ಸಮುದ್ರ, ಅಮ್ಮ ಸಮುದ್ರ, ವೀರ ಸಮುದ್ರ, ಅಚ್ಚುತೇಂದ್ರ ಸಮುದ್ರ, ವೆಂಕಟೇಂದ್ರ ಸಮುದ್ರ, ಪಿನ್ನ-ಲಕ್ಕಸಮುದ್ರ, ಚಿನ್ನ ತಿಪ್ಪಸಮುದ್ರ, ಪೆದ್ದ-ಲಕ್ಕಸಮುದ್ರ, ಲಿಂಗಾಲಯ ತಟಾಕ, ವೆಂಕಟಯ್ಯ ತಟಾಕ, ಪೆದ-ತಿಮ್ಮಸಮುದ್ರ ಮತ್ತು ಚಿನ-ಬಾಚಸಮುದ್ರ ಎಂಬ ಹದಿನಾರು ಕೆರೆಗಳನ್ನು ಕಟ್ಟಿಸಿದನು ಎಂಬ ಉಲ್ಲೇಖ ಇದೆ. ಅದೇ ರೀತಿಯಾಗಿ ಸಂಗೀತ ಬಗ್ಗೆ ಒಂದು ಪುಸ್ತಕವನ್ನು ಬರೆದನು. ಈತನ ತಂದೆಯ ಸಹೋದರರಾದ ತಿಮ್ಮಾಮಂತ್ರಿ, ಸುರೀಂದ್ರ, ಭಾಸ್ಕರ-ಚಮೂಪತಿ ಮತ್ತು ಭಾವಯ್ಯರು ಅರಸರ ಕೆಳಗೆ ಉನ್ನತ ಅಧಿಕಾರಿಗಳಾಗಿದ್ದರು.[೬]

**ಚಿಕ್ಕ ಕೆರೆಯಾಗಿನಹಳ್ಳಿ ಕೆರೆಗೆ ಸಂಬಂಧಿಸಿದಂತೆ ದಂತ ಕಥೆಗಳಿವೆ.**

**ಕಥೆ-೧**

ಇಂದಿನ ಕೆರೆಯಾಗಳಹಳ್ಳಿ ಸಮೀಪ ಬೃಹತ್ ಕೆರೆಯೊಂದನ್ನು ನಿರ್ಮಿಸುವ ಕಾಲದಲ್ಲಿ ಅದರ ಕೋಡಿ ನಿಲ್ಲದೆ ಪ್ರತಿನಿತ್ಯ ಬಿದ್ದು ಹೋಗುತ್ತಿತ್ತು. ಅದು ನಿಂತು ಕೆರೆಯ ಕಾಮಗಾರಿ ಪೂರ್ತಿಯಾಗಬೇಕಾದರೆ ತುಂಬಿದ ಗರ್ಭಿಣಿಯನ್ನು ಬಲಿ ನೀಡಬೇಕೆಂದು ಆ ಗ್ರಾಮದ ಗೌಡನಿಗೆ ಒಮ್ಮೆ ಕನಸುಬಿತ್ತಂತೆ. ಇದರಿಂದ ಚಿಂತಾಕ್ರಾಂತನಾಗಿ ದಾರಿ ಕಾಣದೆ ತನ್ನ ಹಿರಿಯ ಸೊಸೆಯನ್ನು ಅಲ್ಲಿನ ಕೆರೆಗೆ ಬಲಿ ನೀಡಲು ಮುಂದಾಗುತ್ತಾನೆ. ಆಲ ಮೂಲ ಮತ್ತು ವಾಸ್ತುವನ್ನು ಬಲ್ಲ ಬಯಕಾರ ರಾಮಪ್ಪನಿಗೆ ಈ ಸುದ್ದಿ ತಿಳಿದು ಆ ಸ್ಥಳಕ್ಕೆ ಆಗಮಿಸಿ ಆ ಪ್ರದೇಶವನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿ ಆ ಕೆರೆಯ ಕೋಡಿಯನ್ನು ಬೇರೆ ಸ್ಥಳದಲ್ಲಿ ಸಮಾನಾಂತರವಾಗಿ ನಿರ್ಮಿಸಲು ಸೂಚಿಸಿದನಂತೆ. ಅದರಂತೆ ಮಾಡಿದ್ದರಿಂದ ಕೆರೆ ಕೋಡಿ ನಿಂತು ಅದರ ಕಾಮಗಾರಿ ಸ್ವಲ್ಪ ದಿನಗಳಲ್ಲೇ ಮುಗಿಯಿತು. ಇದರಿಂದ ಸಂತೋಷಗೊಂಡ ಜನರು ತುಂಬು ಗರ್ಭಧರಿಸಿದ ಕುರಿಯೊಂದನ್ನು ತಂದು ಗಂಗೆ ಪೂಜೆಯನ್ನು ಮಾಡಿದರಂತೆ. ಈ ರೀತಿ ಬಲಿ ಆಗಲಿದ್ದ ಜೀವಗಳನ್ನು ಉಳಿಸಿದ ಕೀರ್ತಿ ಆತನದಾಗಿದೆ.

ಕಥೆ-೨

ಒಮ್ಮೆ ದೇವತೆಗಳು ಆಕಾಶ ಮಾರ್ಗವಾಗಿ ಹೋಗುವಾಗ ಅವರ ದೇವತೆಯ ಮುತ್ತಿನ ಸರವೊಂದು ಹರಿದು ಮುತ್ತುಗಳು ಹರಿದು ಬಿದ್ವಂತೆ. ಆ ಮುತ್ತುಗಳು ಎಲ್ಲಲ್ಲಿ ಬಿದ್ದವೂ ಆ ಜಾಗದಲ್ಲೆಲ್ಲಾ ಗುಡಿ ಗೋಪುರಗಳನ್ನು, ಕೆರೆ ಬಾವಿಗಳನ್ನು, ಅಲ್ಲಿ ಪಾಳೆಯಗಾರನಾಗಿದ್ದ ಬಯಕಾರ ರಾಮಪ್ಪ ನಿರ್ಮಾಣ ಮಾಡಿದ ಎಂದು ಊರಿನ ಹಿರಿಯರು ಹೇಳುತ್ತಾರೆ.

ಈ ಕೆರೆಯು ಇಂದು ಉತ್ತಮ ಸ್ಥಿತಿಯಲ್ಲಿ ಇದ್ದು ನೂರಾರು ಎಕರೆಗಳಿಗೆ ನೀರನ್ನು ಉಣಿಸುವ ಸ್ಥಿತಿಯಲ್ಲಿದೆ. ಏರಿಯು ಸುವ್ಯವಸ್ಥೆಯಲ್ಲಿ ಇದ್ದು ೫೯೦ ಮೀ ಉದ್ದಯಿದೆ. ಈ ಏರಿಗೆ ಸಂಬಂಧಿಸಿದಂತೆ ಇದರ ನಿರ್ಮಾಣವನ್ನು ಕಲ್ಲುಗಳಿಂದ  ಇಳಿಜಾರಿನ ರೂಪದಲ್ಲಿ ನಿರ್ಮಿಸಿದ್ದಾರೆ. ಇದಕ್ಕೆ ಸರಿ ಹೊಂದುವಂತೆ ದಪ್ಪ ಗಾತ್ರದಲ್ಲಿ ಮಣ್ಣನ್ನು ಏರಿರುವುದರಿಂದ ಇಂದು ಉತ್ತಮ ಸ್ಥಿತಿಯಲ್ಲಿರುವಂತದ್ದು. ಸಾಮನ್ಯವಾಗಿ ಈ ಏರಿಯ ಮೇಲೆ ಬಂಡಿ ದಾರಿ ಹೋಗುವಷ್ಟು ದಾರಿಯಿದ್ದು ಏರಿ ನಿರ್ಮಾಣ ಸಂದರ್ಭದಲ್ಲಿ ಹಾಕಿದಂತಹ ಯೋಜನೆಗಳಿಗೆ ಅನುಗುಣವಾಗಿ ಈ ಕೆರೆಯನ್ನು ಕಟ್ಟಿದ್ದಾರೆ. ಈ ಏರಿಯಾ ಮುಂಭಾಗದಲ್ಲಿ ಹೊಂದಿಕೊಂಡಂತೆ ಬಯಕಾರ ರಾಮಪ್ಪನ ಶಾಸನ ಇದೆ. ಈ ಕೆರೆಗೆ ಒಂದು ತೂಬು ಇದ್ದು ಇದು ಉತ್ತಮವಾಗಿದೆ.

ತೂಬು ಕೆರೆಗೆ ಮೂಲ ಆಧಾರ ಸ್ತಂಭ ಆಗಿರುವುದರಿಂದ ವ್ಯವಸಾಯಕ್ಕೆ ಅನುಕೂಲವಾಗುವಂತೆ ಇದನ್ನು ನಿರ್ಮಿಸಲಾಗಿದೆ. ನೀರಿನ ಮಟ್ಟ ಅಳೆಯಲು, ಒತ್ತಡ ನಿಭಾಯಿಸಲು ಈ ತೂಬುಗಳು ಪ್ರಮುಖ ಪಾತ್ರವಹಿಸುತ್ತವೆ. ಆದ್ದರಿಂದಾಗಿ ಇವುಗಳ ಅವಶ್ಯಕತೆ ಮುಖ್ಯ. ಈ ಕೆರೆಗೆ ಎರಡು ಕೋಡಿಗಳು ಇರುವವು ಇವು ಇಂದಿಗೂ ಕೆರೆ ತುಂಬಿದಾಗ ಹರಿದು ಹೋಗಲು ವ್ಯವಸ್ಥೆ ಕಲ್ಪಿಸಲಾಗಿದೆ. ಇವುಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ.

ಇಂದು ಗ್ರಾಮಸ್ಥರು ಚೆಕ್ ಡ್ಯಾಂ ರೀತಿಯಲ್ಲಿ ಇವುಗಳನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಆದ್ದರಿಂದ ಇಲ್ಲಿನ ಕೃಷಿ ಭೂಮಿಗೆ ಅನುಕೂಲವಾಗುವಂತೆ ಈ ಕೋಡಿ ನಿರ್ಮಿಸಲಾಗಿದೆ. ಈ ಕೆರೆಯು ವಿಶಾಲವಾದ ಮೈದಾನದಲ್ಲಿದ್ದು ಚಿಕ್ಕ ಕೆರೆಯಾಗಿನಹಳ್ಳಿಯ ಹಿಂಭಾಗದಲ್ಲಿದೆ. ಇಂದಿಗೂ ಪ್ರಾಣಿ, ಪಕ್ಷಿ, ಮಾನವನಿಗೆ ನೀರಿನ ಉಪಯೋಗ ಇಲ್ಲಿ ಕಾಣುತ್ತವೆ. ಅದೇ ರೀತಿಯಾಗಿ ಸುಮಾರು ೫೦ ರಿಂದ ೬೦ ಎಕರೆಗೆ ನೀರನ್ನು ಒದಗಿಸುವ ಕೆಲಸ ಮಾಡುತ್ತಿದೆ. ಈ ಕೆರೆಯು ಇಂದು ಸುತ್ತಮುತ್ತಲಿನ ಹಳ್ಳಿಗಳಿಗೆ ಜೀವಜಲವಾಗಿದೆ. ಈ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ಅನೇಕ ರೀತಿಯ ಬೆಳೆ ಅಂದರೆ ಜೋಳ, ರಾಗಿ, ಕಡಲೆ, ಮೆಕ್ಕೆಜೋಳ, ಹುರುಳಿ, ಟಮೋಟೊ, ತೆಂಗು, ಭತ್ತ ಹೀಗೆ

ಹಲವಾರು ಬೆಳೆಗಳನ್ನು ಈ ಕೆರೆಯ ನೀರಿನಿಂದ ಬೆಳೆಯುತ್ತಾರೆ. ಈ ಕೆರೆಯ ಮುಂಭಾಗದಲ್ಲಿ ಗದ್ದೆಗಳಿಗೆ ನೀರನ್ನು ಒದಗಿಸಲು ಸಣ್ಣ ಗಾತ್ರದ ಕಾಲುವೆಗಳನ್ನು ನಿರ್ಮಾಣ ಮಾಡಿದ್ದಾರೆ. ಇವು ಇಂದಿಗೂ ಉತ್ತಮ ವ್ಯವಸ್ಥೆಯಲ್ಲಿವೆ.

ಒಂದು ಭಾರಿ ಈ ಕೆರೆಯು ತುಂಬಿದರೆ ಕನಿಷ್ಠ ಎರಡು ಬೆಳೆಯನ್ನು ತೆಗೆಯಬಹುದು. ಇಲ್ಲಿನ ಜನ ಸಮುದಾಯಕ್ಕೆ ಸಂಬಂಧಿಸಿದಂತೆ ಮೊದಲು ಈ ಕೆರೆಯ ಏರಿಯ ಮೇಲೆ ವಾಸವಿದ್ದ ಜನರು ತರುವಾಯ ದಂಡೆಯ ಮುಂಭಾಗದಲ್ಲಿ ಒಂದು ಹಳ್ಳಿಯ ರೀತಿಯಲ್ಲಿ ವಾಸವಿದ್ದಾರೆ. ಈ ಕೆರೆಗೆ ಸಂಬಂಧ ಹೊಂದಿದಂತೆ ಇದರ ಜೀರ್ಣೋದ್ಧಾರ ಮಾಡಬೇಕಾಗಿದೆ. ಹೂಳು ತುಂಬಿರುವುದರಿಂದ ನೀರಿನ ಶೇಖರಣೆಗೆ ಆಡಚಣೆ ಆಗಿದೆ ಇದನ್ನು ತೆಗೆದರೆ ಉತ್ತಮ ನೀರಿನ ವ್ಯವಸ್ಥೆ ಕಾಣುತ್ತವೆ. ಕೆರೆಯಲ್ಲಿ ನೀರಿನ ಪ್ರಮಾಣ ಕಡಿಮೆಯಾಗಿದ್ದು ಕೇವಲ ಮಳೆ ನೀರನ್ನು ಮಾತ್ರ ಆವರಿಸಿದೆ.

ನೀರಿನ ಶೇಖರಣೆ ಸಂಬಂಧಿಸಿದಂತೆ ಯಾವುದೇ ಕಡೆಯಿಂದ ನೀರು ಇಲ್ಲಿ ಬರುವುದಿಲ್ಲ ಸುತ್ತ ಮುತ್ತಲಿನ ಗ್ರಾಮಗಳ ಮುಖಾಂತರ ನೀರು ಮಳೆ ಬಂದಾಗ ಭರ್ತಿಯಾಗುತ್ತದೆ. ಈ ಕೆರೆಯು ಬಯಕಾರ ರಾಮಪ್ಪನ ಒಂದು ಅಮೋಘ ಕೊಡುಗೆಯಾಗಿದೆ. ಈ ಕೆರೆಯ ಏರಿಯ ಮೇಲೆ ಮಲಿಯಮ್ಮ ಗುಡಿಯಿದೆ. ಇದು ನಾಲ್ಕು ಬಂಡೆಗಳ ನಡುವೆ ಮೇಲೆ ಬಂಡೆಯನ್ನು ಹಾಸಿ ನಿರ್ಮಿಸಿದ್ದಾರೆ. ಈ ಮಲಿಯಮ್ಮ ದೇವಿಯ ವಿಶೇಷತೆ ಅಂದರೆ ಇಲ್ಲಿ ಪ್ರಮುಖವಾಗಿ ಕೆರೆತುಂಬಿ ಕೋಡಿ ಬಿದ್ದಾಗ ಕೆಲವು ಆಚರಣೆ ಈ ಭಾಗದಲ್ಲಿ ಮಾಡುತ್ತಾರೆ.

ಮುಖ್ಯವಾಗಿ ಊರಿನಲ್ಲಿ ಇರುವ ದುರುಗಮ್ಮ ದೇವಿಯ ಜಾತ್ರೆಯಲ್ಲಿ ಕುರಿ, ಕೋಳಿಗಳನ್ನು ಬಲಿಕೊಡುವ ಸಂದರ್ಭದಲ್ಲಿ ಈ ಮಲಿಯಮ್ಮ ದೇವಾಸ್ಥಾನದ ಮುಂದೆ ಬಲಿಕೊಡುತ್ತಾರೆ. ಅದೇ ರೀತಿಯಾಗಿ ಈ ಜಾತ್ರೆಯನ್ನು ವರ್ಷಕ್ಕೆ ಒಂದು ಸಲ ಮಾಡುತ್ತಾರೆ ಇದಕ್ಕೆ ಸುತ್ತಮುತ್ತಲಿನ ಗ್ರಾಮಸ್ಥರು ಹಾಗೂ ಊರಿನ ಪ್ರಮುಖ ಮುಂಖಡರು ಭಾಗವಹಿಸಿ ಆಚರಣೆ ಮಾಡುತ್ತಾರೆ ಅದೇ ರೀತಿ ಕನ್ನಿರಮ್ಮ ದೇವಾಸ್ಥಾನವು ಈ ದಂಡೆಯ ಮೇಲಿದೆ.

**೨. ಅಚ್ಚುತಮ್ಮ ಸಮುದ್ರ**

| | |
|---|---|
| ಕೆರೆಯ ಸ್ಥಳ : ಹುಲಿಕುಂಟೆ ೭೩ | ಕಟ್ಟಿಸಿದವರು : ಬಯಕಾರ ರಾಮಪ್ಪ |
| ತಾಲೂಕು : ಸಂಡೂರು | ದಿಕ್ಕು : ಪಶ್ಚಿಮ |
| ಜಿಲ್ಲೆ : ಬಳ್ಳಾರಿ | ಕಾಲ : ಕ್ರಿ.ಶ. ೧೨.೦೪.೧೫೫೬ |

ಅಚ್ಚುತಮ್ಮ ಸಮುದ್ರ ಸಂಬಂಧಿಸಿದಂತೆ ಈ ಕೆರೆಕಟ್ಟೆಗೆ ಸೇರಿರುವ ಶಾಸನದಿಂದ ಇದನ್ನು ಶಾಲಿವಾಹನ ಶಕ ೧೪೭೮ನೆಯ ನಳಸಂವತ್ಸರದ ವೈಶಾಖ, ಶು.೩ಕ್ಕೆ ಸರಿಯಾದ ಕ್ರಿ.ಶ.೧೨.೦೪.೧೫೫೬ನೇ ಭಾನುವಾರದಂದು ಬಯಕಾರ ರಾಮಪ್ಪನು ತನ್ನ ಮಗಳು ಅಚ್ಚುತಮ್ಮನ ನೆನಪಿನಲ್ಲಿ ಕಟ್ಟಿಸಿದ ಅಚ್ಚುತಮ್ಮ ಸಮುದ್ರ ಮತ್ತು ಬಾಲಕೃಷ್ಣ ದೇವರಗುಡಿ, ಅಚ್ಚುತಂಮಾಪುರ ಗ್ರಾಮದ ಉಲ್ಲೇಖವಿದೆ. ಅಲ್ಲದೇ ಆತನು ಕೈಗೊಂಡ ಪ್ರಜಾಹಿತ ಕಾರ್ಯಗಳ ಉಲ್ಲೇಖವಿದೆ. ಈ ಕೆರೆಗೆ ಏರಿಯನ್ನು ಕಲ್ಲುಗೋಡೆಗಳಿಂದ ನಿರ್ಮಾಣಗೊಂಡಿದೆ, ಇಂದಿಗೂ ಸುಭದ್ರವಾಗಿದೆ. ಕೆರೆಯು ಏರಿ, ತೂಬು, ಕೋಡಿ, ಕಾಲುವೆ, ಕೆರೆಯ ಅಂಗಳವನ್ನ ಹೊಂದಿದೆ.[೧೦]

ಈ ಕೆರೆ ಏರಿ ೬೦೦ ಮೀ.ಉದ್ದ ೧೬ ಮೀ.ಅಗಲವಾಗಿದೆ. ಮೂರು ತೂಬುಗಳಿದ್ದು ಇವು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ. ಕೋಡಿಯು ಒಂದು ಇದೆ. ನೀರನ್ನು ಕಾಲುವೆಗಳ ಮುಖಾಂತರ ಸಾಗಿಸಲು ನಾಲ್ಕು ದೊಡ್ಡ ಕಾಲುವೆ ೬-೭ ಸಣ್ಣ ಕಾಲುವೆಗಳನ್ನು ಈ ಕೆರೆಗೆ ನಿರ್ಮಾಣ ಮಾಡಿದ್ದಾರೆ. ಬಯಕಾರ ರಾಮಪ್ಪನು ಕಟ್ಟಿಸಿದ ಕೆರೆಗಳಲ್ಲಿ ಇದು ಅತಿ ದೊಡ್ಡ ಕೆರೆಯಾಗಿದೆ. ಕಾಟಿನಕಂಬ, ಉತ್ತರಮಲ್ಯೆ ಗ್ರಾಮಗಳಿಂದ ಹಾಗೂ ಹಳ್ಳ-ಕೊಳ್ಳಗಳಿಂದ ನೀರು ಈ ಕೆರೆಗೆ ಸಂಗ್ರಹವಾಗುತ್ತದೆ. ಹೀಗೆ ಸಂಗ್ರಹವಾದ ನೀರು ಇಲ್ಲಿಂದ ಜಂಭಯ್ಯನಕೆರೆ, ಚಿಲಕನಹಟ್ಟಿಕೆರೆ, ಜಾಲಿಕುಂಟೆಕೆರೆ, ಮಗಿಮಾವಿನಹಳ್ಳಿಕೆರೆ, ಹಂಪಪಟ್ಟಣಕೆರೆಯ ಮುಖಾಂತರವಾಗಿ ತುಂಗಾಭದ್ರ ಜಲಾಶಯ ಸೇರುತ್ತವೆ. ಕೆರೆಯ ಅಂಗಳ ವಿಶಾಲವಾಗಿದ್ದು ನೀರಾವರಿಗೆ ಉತ್ತಮವಾಗಿದೆ. ಈ ಪ್ರದೇಶದ ಮಣ್ಣು ವ್ಯವಸಾಯಕ್ಕೆ ಯೋಗ್ಯವಾಗಿದೆ. ಈ ಪ್ರದೇಶದಲ್ಲಿ ವಿವಿಧ ರೀತಿಯ ಬೆಳೆಗಳನ್ನು ಬೆಳೆಯುವುದು ಕಂಡುಬರುತ್ತವೆ.

**೩. ಅಕ್ಕ ಸಮುದ್ರಂ**

| | |
|---|---|
| ಕೆರೆಯ ಸ್ಥಳ : ಪೋತಲಕಟ್ಟೆ | ಕಟ್ಟಿಸಿದವರು : ಬಯಕಾರ ರಾಮಪ್ಪ |
| ತಾಲೂಕು : ಹೊಸಪೇಟೆ | ದಿಕ್ಕು : ಉತ್ತರ |
| ಜಿಲ್ಲೆ : ಬಳ್ಳಾರಿ | ಕಾಲ : ಕ್ರಿ.ಶ. ೧೫೫೯ |

ಈ ಕೆರೆ ಬಯಕಾರ ರಾಮಪ್ಪನು ತನ್ನ ಮಗ ಅಕ್ಕಪ್ಪನಿಗೆ ಪುಣ್ಯವಾಗಲೆಂದು ಕೆರೆಯನ್ನು ಕಟ್ಟಿಸಿದನು ಇದಕ್ಕೆ ಅಕ್ಕ ಸಮುದ್ರ ಎಂದು ಹೆಸರಿಟ್ಟದ್ದನ್ನು ತಿಮ್ಮಾಲಾಪುರದ ಉಪ ಗ್ರಾಮವಾದ ಪೋತಲಕಟ್ಟೆಯ ಕೆರೆಯ ಕೋಡಿಯ ಹತ್ತಿರದ ಕಲ್ಲಿನ ಮೇಲೆ ಇರುವ ಶಾಸನದಿಂದ ತಿಳಿದು ಬರುತ್ತದೆ. ಈ ಕೆರೆಯು ಇಂದು ಉತ್ತಮ ಸ್ಥಿತಿಯಲ್ಲಿರುವ ಬಯಕಾರ ರಾಮಪ್ಪನ ಕೆರೆಗಳಲ್ಲಿ ಇದು

ಕೂಡ ಒಂದು. ಈ ಕೆರೆಯ ನೀರು ಇಂದಿಗೂ ಕೃಷಿಗೆ ಹಾಗೂ ಜನಸಾಮಾನ್ಯರ ಬಳಕೆಗೆ ಯೋಗ್ಯವಾಗಿದೆ. ಈ ಕೆರೆಯ ರಚನೆಯು ಉತ್ತಮವಾಗಿದ್ದು ಬಯಲು ಪ್ರದೇಶದಲ್ಲಿ ನಿರ್ಮಿಸಲಾಗಿದೆ.[೧೧] ಇದರ ಏರಿಯು ಅಗಲವಾಗಿದ್ದು ಇದನ್ನ ಕಲ್ಲುಗಳಿಂದ ಹಾಗೂ ಮಣ್ಣನ್ನು ಉಪಯೋಗಿಸಿ ವ್ಯವಸ್ಥಿತವಾಗಿ ಕಟ್ಟಲಾಗಿದೆ. ಅಲ್ಲಲ್ಲಿ ಶಿಥಿಲವಾಗಿದ್ದು ಉತ್ತಮ ಸ್ಥಿತಿ ಕೆರೆಗಳಲ್ಲಿ ಇದು ಒಂದಾಗಿರುವುದು ವಿಶೇಷ. ಓ ಏರಿಯನ್ನು ನಿರ್ಮಾಣ ಮಾಡುವ ಸಂದರ್ಭದಲ್ಲಿ ಭವಿಷ್ಯದ ಚಿಂತನೆಗಳನ್ನು ಇಟ್ಟುಕೊಂಡು ನಿರ್ಮಿಸಿರಬಹುದು ಏಕೆಂದರೆ ಈ ಕೆರೆಗೆ ನಿರ್ಮಿಸಿದ ಏರಿ ಅಂತಹ ಮಾಹಿತಿಯನ್ನು ನೀಡುತ್ತದೆ. ಆದ್ದರಿಂದಾಗಿ ಕೆರೆಯ ಜೀವಂತಿಕೆ ಕಾಣಬಹುದು. ಕೆರೆಯ ಒಂದು ತೂಬು ಇದ್ದು ಇದರ ಮುಖಾಂತರ ಕೃಷಿಗೆ ನೀರನ್ನು ಒದಗಿಸಲು ಹಾಗೂ ಕೆರೆಯ ನೀರಿನ ಮಟ್ಟವನ್ನು ಅರಿಯಲು ಉಪಯುಕ್ತ ಆಗಿರುವುದು ಈ ತೂಬು ಪ್ರಮುಖವಾಗಿದೆ. ಇನ್ನು ಈ ಕೆರೆಯಲ್ಲಿ ಎರಡು ಕೋಡಿಗಳಿವೆ. ಕೆರೆ ತುಂಬಿದಾಗ ಹರಿದು ಹೋಗಲು ವ್ಯವಸ್ಥೆ ಉತ್ತಮವಾಗಿ ನಿರ್ಮಿಸಲಾಗಿದೆ.

ಕೆರೆಗೆ ಸಂಬಂಧಿಸಿದಂತೆ ನೀರು ಸಮೀಪದ ನಡುಗುತ್ತಿ, ಮಲ್ಲಾಪುರ, ಕೊಂಡಾಪುರ ಮುಂತಾದ ಊರು ಹಾಗೂ ಬೆಟ್ಟ-ಗುಡ್ಡ, ಹಳ್ಳ-ಕೊಳ್ಳಗಳಿಂದ ನೀರು ಸಂಗ್ರಹ ಆಗುತ್ತಿದೆ. ಇಲ್ಲಿನ ನೀರನ್ನು ಪ್ರಧಾನವಾಗಿ ಕೃಷಿಗೆ ಬಳಸಲಾಗುತ್ತದೆ. ಒಮ್ಮೆ ಈ ಕೆರೆಯು ಭರ್ತಿಯಾದರೆ ಮೂರು ಬೆಳೆಗಳನ್ನು ತೆಗೆಯಬಹುದು ಎಂದು ಪೋತಲಕಟ್ಟೆ ಕೆರೆಯ ನೀರ್ಗಂಟಿಯಾದ ದೇವೇಂದ್ರಪ್ಪ ಅವರು ಅಭಿಪ್ರಾಯ. ಆದ್ದರಿಂದ ಈ ಕೆರೆಯು ಸುತ್ತ ಮುತ್ತಲಿನ ಗ್ರಾಮಸ್ಥರಿಗೆ ಅತಿ ಪ್ರಮುಖವಾಗಿರುವಂತದ್ದು. ಕಾಲುವೆಗಳಿಗೆ ಸಂಬಂಧ ಪಟ್ಟಂತೆ ಅಲಲ್ಲಿ ಚಿಕ್ಕದಾದ ಕಾಲುವೆಗಳನ್ನು ಅಳವಡಿಸಿದ್ದಾರೆ. ಇದರ ಮೂಲಕ ಕೃಷಿಕರ ಜೀವನ ಸಾಗಿಸಲು ಅನುಕೂಲವಾಗಿದೆ.

ಕೆರೆಯ ನೀರು ತುಂಬಿದ ನಂತರ ಚಿಲಕನಹಟ್ಟಿ ಕೆರೆ, ಮಗಿಮಾವಿನಹಳ್ಳಿ ಕೆರೆ, ಹಂಪಪಟ್ಟಣ ಕೆರೆಯ ಮೂಲಕ ಹರಿದು ಕೊನೆಗೆ ಡ್ಯಾಂ ಸೇರುತ್ತದೆ. ಇದು ಇತ್ತಿಚ್ಚಿನ ದಿನಮಾನಗಳಲ್ಲಿ ಅವನತಿಯ ಆದಿಯಲ್ಲಿ ಇರುವುದು. ಆದರೆ ಸರ್ಕಾರದ ಹಾಗೂ ಊರಿನ ಗ್ರಾಮಸ್ಥರ ಪ್ರಜ್ಞೆಯಿಂದ ಇಂದು ಊಳು ಎತ್ತುವ ಕೆರೆಯ ಸ್ವಚ್ಛತೆ ಕಾಪಾಡುವ ನಿಟ್ಟಿನಲ್ಲಿ ಉತ್ತಮ ಕೆಲಸಗಳು ಮಾಡಿದ್ದಾರೆ. ಒಮ್ಮೆ ಭರ್ತಿಯಾದ ಕೆರೆಯ ನೀರನ್ನು ೮೦-೯೦ ಎಕರೆಗೆ ಬೆಳೆ ಬೆಳೆಯಲು ಅನುಕೂಲವಾಗಿದೆ. ಅದೇ ರೀತಿಯಾಗಿ ಇಲ್ಲಿನ ಅಚ್ಚುಕಟ್ಟು ಪ್ರದೇಶವು ವ್ಯವಸ್ಥಿತವಾಗಿದ್ದು ಪ್ರಮುಖವಾಗಿ ಈ ಭಾಗದಲ್ಲಿ ಶೇಂಗಾ, ಜೋಳ, ಭತ್ತ, ಗೋಧಿ, ಈರುಳ್ಳಿ, ಮೆಣಸಿನಕಾಯಿ, ಟಮೋಟೊ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

ಈ ಕೆರೆಯು ವಿಶಾಲವಾದ ಅಂಗಳ ಹೊಂದಿದ್ದು ಇತ್ತಿಚಿಗೆ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಊಳು ತೆಗೆಯುವ ಕೆಲಸ ಮಾಡಿದ್ದಾರೆ. ಈ ಪೋತಲಕಟ್ಟೆಗೆ ಸಂಬಂಧ ಪಟ್ಟಿರುವಂತೆ ಅನೇಕ ರೀತಿಯ ಕಟ್ಟುಪಾಡುಗಳನ್ನು ಕಾಣುತ್ತವೆ. ಪ್ರಮುಖವಾಗಿ ಇಲ್ಲಿನ ನೀರು ದುರುಪಯೋಗ ಆಗಬಾರದು ಎನ್ನುವ ನಿಟ್ಟಿನಲ್ಲಿ ಅಲ್ಲಿನ ಗ್ರಾಮಸ್ಥರು ಹಲವಾರು ನಿಯಮಗಳನ್ನು ಇಂದಿಗೂ ಪಾಲಿಸುತ್ತ ಬಂದಿದ್ದಾರೆ.

ಅದರಲ್ಲಿ ಮುಖ್ಯವಾಗಿ ಈ ನೀರನ್ನು ಕುಡಿಯಲು ಹಾಗೂ ಕೃಷಿಗೆ ಮಾತ್ರ ಬಳಕೆ ಮಾಡುತ್ತಾರೆ. ಉಳಿದಂತೆ ಕೆರೆಯ ಬಳಿ ಸ್ನಾನ ಮಾಡುವ, ಬಟ್ಟೆ ತೊಳೆಯುವ, ದನಕರುಗಳಿಗೆ ಮೈತೊಳೆಯಲು ಪ್ರವೇಶವಿಲ್ಲ ಹೆಣ್ಣು ಮಕ್ಕಳ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿ ಯಾರೇ ಆಗಲಿ ಈ ಕೆರಯ ಬಳಿ ಬಂದು ದೈನಂದಿನ ಕಾರ್ಯ ಚಟುವಟಿಕೆ ಹಾಗೂ ನೀರನ್ನು ಮಟ್ಟುವಂತಿಲ್ಲ.

ಈ ಕೆರೆಯು ತುಂಬಿದಾಗ ಈ ಗ್ರಾಮದ ಮುಖ್ಯಸ್ಥರ ಸಂಮುಖದಲ್ಲಿ ಹಾಗೂ ಸುತ್ತಮುತ್ತಲಿನ ಗ್ರಾಮಸ್ಥರು ಸೇರಿ ಇಲ್ಲಿ ಹಬ್ಬ ಆಚರಣೆ ಮಾಡುತ್ತಾರೆ. ಪ್ರಮುಖವಾಗಿ ಗಂಗಪೂಜೆ ಗಂಗಮ್ಮ ಮಾಡುವ ಆಚರಣೆ ಪ್ರಮುಖವಾಗಿದೆ. ಕೆರೆ ಕೋಡಿ ಬಿದ್ದಾಗ ಪೂಜಾರಿಗಳ ಕರೆಸಿ ಶಾಂತಿ ಮಾಡಿಸುವ ಕಾರ್ಯ ಮಾಡಿಸುತ್ತಾರೆ. ಈ ಕೆರೆಯ ಏರಿಯು ಅಗಲ ಇರುವುದರಿಂದ ಇಲ್ಲಿ ಸಣ್ಣ ಪುಟ್ಟ ದೇವಾಲಯ ಕಾಣುತ್ತವೆ. ಅದರಲ್ಲಿ ಪ್ರಮುಖವಾಗಿ ಕೋಡಿ ದುರುಗಮ್ಮ ಎಂದು ಕರೆಯುವ ಈ ದೇವಿಯ ಆಚರಣೆ ಭಿನ್ನವಾಗಿದೆ. ಕೋಡಿ ಬಿದ್ದಾಗ ಮರಿ ಕಡಿಯುವ ಉಗ್ರ ಆಚರಣೆಯಿದೆ. ಈ ದಿನದಂದು ಊರಿನ ಗ್ರಾಮಸ್ಥರು ಸೇರಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಕೆರೆಯ ಏರಿಯ ಮೇಲೆ ಇರುವ ಇನ್ನೋಂದು ದೇವಾಲಯ ಎಂದರೆ ಮಕ್ಕಳಮ್ಮ ದೇವಾಸ್ಥಾನ ಇದು ಪ್ರಮುಖವಾದ ಆಚರಣೆಗಳಿಗೆ ಹೆಸರುವಾಸಿಯಾಗಿದೆ. ಇಲ್ಲಿ ಒಂಭತ್ತು ವರ್ಷಗಳಿಗೊಮ್ಮೆ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬಕ್ಕೆ ಊರಿನ ಮುಖ್ಯಸ್ಥರು, ಹಿರಿಕರು ಸೇರಿದಂತೆ ಸುತ್ತಮುತ್ತಲಿನ ಗ್ರಾಮಗಳಿಂದ ಅನೇಕ ಭಕ್ತಾಧಿಗಳು ಆಗಮಿಸುತ್ತಾರೆ. ಇಲ್ಲಿ ಮುಖ್ಯವಾಗಿ ಹಬ್ಬವನ್ನು ಮೂರು ದಿನ ಆಚರಣೆ ಮಾಡುತ್ತಾರೆ.

ಮೊದಲನೆಯ ದಿನ ಸಿಹಿ ಮಾಡುವ ಮೂಲಕ ಹಬ್ಬವನ್ನು ಪ್ರಾರಂಭಿಸುತ್ತಾರೆ. ನಂತರ ಮೂರನೆಯ ದಿನ ಬೇಟೆಯನ್ನು ಮಾಡುತ್ತಾರೆ ಇಲ್ಲಿ ಮುಖ್ಯವಾಗಿ ಕುರಿ ಕೋಳಿಗಳನ್ನು ಬೇಟೆ ಮಾಡುತ್ತಾರೆ ಎಂದು ಮಕ್ಕಳಮ್ಮ ದೇವಾಲಯದ ಪೂಜರಿಯಾದ ತಾಯಪ್ಪ ಅವರು ತಿಳಿಸುತ್ತಾರೆ. ಈ ದೇವಿಗೆ ಶುಕ್ರವಾರ ಮತ್ತು ಮಂಗಳವಾರ ವಿಶೇಷ ಪೂಜೆ ನಡೆಯುತ್ತದೆ. ಇದರಿಂದ ಬರುವ ಭಕ್ತಾಧಿಗಳ ಸರ್ವಸಿದ್ಧಿಗೆ ಪಾತ್ರರಾಗುತ್ತಾರೆ.

**೪. ಬಾಚ ಸಮುದ್ರ**

ಕೆರೆಯ ಸ್ಥಳ : ತಿಮ್ಮಲಾಪುರ

ತಾಲೂಕು : ಹೊಸಪೇಟೆ

ಜಿಲ್ಲೆ : ಬಳ್ಳಾರಿ

ಕಟ್ಟಿಸಿದವರು : ಬಯಕಾರ ರಾಮಪ್ಪ

ದಿಕ್ಕು : ದಕ್ಷಿಣ

ಕಾಲ : ಕ್ರಿ.ಶ. ೧೫೩೯

ಈ ಕೆರೆಯು ಹೊಸಪೇಟೆಯಿಂದ ಬರುವ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ಬರುವಂತ ಕೆರೆ. ಇದು ತಿಮ್ಮಲಾಪುರ ಗ್ರಾಮಕ್ಕೆ ಸೇರಿದ ಕೆರೆಯಾಗಿದೆ. ಇದನ್ನು ಜಂಭಯ್ಯನ ಕೆರೆ ಅಥವಾ ಬಾಚ ಸಮುದ್ರ ಎಂದು ಕರೆಯುತ್ತಾರೆ. ಇದನ್ನು ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ಬಾಚ ರಾಸಯ್ಯನಿಗೆ ಪುಣ್ಯವಾಗಲೆಂದು ಕೆರೆಯನ್ನು ಕಟ್ಟಿಸಿದ್ದಾನೆ ಎಂದು ಅಲ್ಲಿನ ಶಾಸನ ತಿಳಿಸುತ್ತದೆ. ಇದರಿಂದಾಗಿ ಈ ಕೆರೆಯ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ತಿಳಿಯಲು ಸಾಧ್ಯವಾಗಿದೆ. ಕೆರೆಯ ಏರಿಯು ವಿಶಾಲವಾಗಿದ್ದು ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ ಏರಿಯನ್ನು ದಪ್ಪಕಲ್ಲುಗಳಿಂದ ಮಣ್ಣು ಬಳಸಿ ನಿರ್ಮಿಸಲಾಗಿದೆ. ಇದು ಇಂದು ಅವನತಿಯ ಹಂತದಲ್ಲಿದೆ. ನೀರು ಉಣಿಸುವ ಪ್ರಮುಖ ಕೆರೆಗಳಲ್ಲಿ ಈ ಕೆರೆಯು ಪ್ರಮುಖವಾಗಿರುವಂತದು. ಆದ್ದರಿಂದಾಗಿ ಈ ಏರಿಯನ್ನು ಸುಭದ್ರತೆಯಿಂದ ವೆಚ್ಚದಾಯಕವಾಗಿ ನಿರ್ಮಾಣ ಮಾಡಿದ್ದಾರೆ.[೧೨]

ಈ ಕೆರೆಯು ಅಡವಿಯ ಮಧ್ಯೆ ಬರುವಂತದ್ದು ಆದ್ದರಿಂದ ಇಂದು ಈ ಕೆರೆಯ ನೀರಿನ ಪ್ರಯೋಜನೆ ಗ್ರಾಮದ ಜನತೆ ಜೊತೆಗೆ ಸುತ್ತಮುತ್ತಲಿನ ಗ್ರಾಮಗಳಿಗೆ ಅನುಕೂಲ. ಸರಳವಾಗಿ ಹೇಳುವುದಾದರೆ ಬಯಕಾರ ರಾಮಪ್ಪನು ನಿರ್ಮಿಸಿದಂತ ಕೆರೆಗಳು ಎಲ್ಲಾವು ದೊಡ್ಡ ಕೆರೆಗಳೆ ಆಗಿವೆ. ಆದ್ದರಿಂದ ಇವು ಇಂದಿಗೂ ಸಹ ನೀರನ್ನು ಉಣಿಸುವ ಪ್ರವೃತ್ತಿಯನ್ನು ಹೊಂದಿವೆ. ಬಯಕಾರ ಕಾಲದಲ್ಲಿ ಇವುಗಳಿಗೆ ಪ್ರತ್ಯೇಕ ಸ್ಥಾನಮಾನ ನೀಡಿರಬಹುದು. ಆದ್ದರಿಂದಲೇ ಇವುಗಳ ಜೀವಂತಿಕೆ ಕಾಣುತ್ತೆವೆ. ಈ ಕೆರೆಯು ಒಂದು ತೂಬನ್ನು ಹೊಂದಿದೆ. ಇದು ಇಂದು ಹಾಳಾದ ಸ್ಥಿತಿಯಲ್ಲಿದೆ. ಇದರ ಮೇಲ್ಭಾಗದಲ್ಲಿ ಇತರೆ ಸೂಕ್ಷ್ಮ ಕೆತ್ತನೆಗಳನ್ನು ಹಾಗೂ ಶಿಲ್ಪಗಳನ್ನು ಕಾಣುತ್ತೇವೆ.

ಏರಿಗೆ ಸಂಬಂಧಿಸಿದಂತೆ ಚೌಕಟ್ಟಾಗಿ ನಿರ್ಮಿತವಾಗಿರುವ ಕೆರೆಗೆ ದೊಡ್ಡ ಬಂಡೆಯ ಆಕಾರದ ಕಲ್ಲುಗಳನ್ನು ವಡ್ಡುಗೆ ಬಳಕೆ ಮಾಡಿರುವುದು ವಿಶೇಷವಾಗಿದೆ. ವಿಶಾಲವಾದ ಅಚ್ಚುಕಟ್ಟು ಪ್ರದೇಶವನ್ನು ಈ ಕೆರೆಯು ಹೊಂದಿದೆ ಅದರಲ್ಲೂ ಪ್ರಮುಖವಾಗಿ ಊರಿನಿಂದ ಮೂರು ಕಿ.ಮೀ. ದೂರದಲ್ಲಿದೆ. ಎರಡು ಕೋಡಿಗಳು ಇವೆ. ಇವುಗಳಿಂದ ಮಳೆ ನೀರಿನ ಮುಖಾಂತರ ಕೆರೆಯು ಭರ್ತಿಯಾದ ಮೇಲೆ ತುಂಬಿ ಹರಿಯಲು ವ್ಯವಸ್ಥಿತವಾಗಿ ನಿರ್ಮಾಣ ಮಾಡಲಾಗಿದೆ. ವಿಶಾಲವಾದ ಅಚ್ಚುಕಟ್ಟು ಪ್ರದೇಶದಲ್ಲಿ

ವಿವಿಧ ಬೆಳೆಗಳನ್ನು ಬೆಳೆಯುತ್ತಾರೆ. ಈ ಕೆರೆಗೆ ನೀರು ಹುಲಿಕುಂಟೆ, ಗ್ರೀರನಹಳ್ಳಿ, ಕಟಿನಕಂಬ, ಶಿವಪುರಗಳ ಮುಖಾಂತರ ನೀರು ಬರುತ್ತವೆ. ಇಲ್ಲಿ ತುಂಬಿದ ನೀರು ಚಿಲಕನಹಟ್ಟಿ, ಹಂಪಪಟ್ಟಣ ಮುಖಾಂತರ ಡ್ಯಾಂ ಸೇರುತ್ತದೆ. ಬೆಟ್ಟ-ಗುಡ್ಡಗಾಡುಗಳ ಮುಖಾಂತರ ನೀರು ಹರಿದು ಬರುವುದು ಇದರಿಂದ ಕೆರೆಯ ಒಳ ಅರಿವು ಹೆಚ್ಚಾಗಲು ಸಹಾಯಕವಾಗಿದೆ. ಈ ಕೆರೆಯ ನೀರು ಕೃಷಿ, ವ್ಯವಸಾಯ, ತೋಟಗಳಿಗೆ ನೀರನ್ನು ಒದಗಿಸುವ ಸಾಮರ್ಥ್ಯ ಹೊಂದಿದೆ.

ಕಾಲುವೆಗಳನ್ನು ಚಿಕ್ಕ ಗಾತ್ರದಲ್ಲಿ ಹೊಲಗಳಿಗೆ ಹೋಗಲು ನಿರ್ಮಿಸಿದ್ದಾರೆ. ಈ ನೀರಿನಿಂದ ಶೇಂಗಾ, ಭತ್ತ, ಗೋಧಿ, ಮೆಕ್ಕೆಜೋಳ, ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಜಂಭಯ್ಯನ ಕೆರೆಯು ಇಂದಿಗೂ ಉತ್ತಮ ರೀತಿಯಲ್ಲಿದೆ. ಕೆರಗೆ ಹೊಂದಿಕೊಂಡಂತೆ ಇರುವ ಅರಣ್ಯ ಇಲಾಖೆಯವರು ಕೆರೆಯನ್ನು ಅಭಿವೃದ್ಧಿ ಮಾಡಲು ಅಡ್ಡಿ ಮಾಡುತ್ತಿದ್ದಾರೆ ಎಂದು ಗ್ರಾಮಸ್ಥರು ಹೇಳುತ್ತಾರೆ. ಒಂದು ಊರು ಬೆಳವಣಿಗೆ ಆಗಲು ನೀರಾವರಿ ತುಂಬಾ ಅವಶ್ಯಕವಾಗಿದೆ. ಅಲ್ಲದೆ ಕೆರೆಗಳು ಅವುಗಳ ಬೆಳವಣಿಗೆಗೆ ಸಹಾಯಕವಾಗಿವೆ. ಜಂಭಯ್ಯನಕೆರೆ ಇಂದಿಗೂ ಅಭಿವೃದ್ಧಿಯ ಹಂತದಲ್ಲಿ ಇರುವುದು. ಈ ಕೆರೆಯ ಏರಿಯ ಮೇಲೆ ಬಸವಣ್ಣನ ದೇವಾಲಯ ಗುಡಿಯಿದೆ. ಇದು ಇಂದಿನ ದಿನಮಾನಗಳಲ್ಲಿ ಅಷ್ಟೇನೂ ಅಭಿವೃದ್ಧಿಯಾಗಿಲ್ಲ ಸಣ್ಣದಾಗಿರುವ ಗುಡಿಯಾಳಗೆ ಮೂಲ ಮೂರ್ತಿಯಿಲ್ಲ ಅದರ ಬದಲಿಗೆ ಬೇರೆ ಬಸವಣ್ಣನ ಮೂರ್ತಿಯನ್ನು ಇಟ್ಟಿದ್ದಾರೆ. ಇದರ ಮೊದಲ ಮೂರ್ತಿ ಕಳವು ಆಗಿದೆ ಎಂದು ಗ್ರಾಮಸ್ಥರು ಹೇಳುತ್ತಾರೆ. ಈ ದೇವಾಲಯದ ವಿಶೇಷತೆ ಎಂದರೆ ಕೆರೆಯು ಭರ್ತಿಯಾದ ಸಂದರ್ಭದಲ್ಲಿ ಹಬ್ಬ ಆಚರಣೆ ಮಾಡುತ್ತಾರೆ.



ಊರಿನ ಎಲ್ಲಾ ಜನರು ಸೇರಿ ಆ ದಿನದಂದು ಸಿಹಿ ಮಾಡಿ ಸುತ್ತಮುತ್ತಲಿನ ಗ್ರಾಮಸ್ಥರನ್ನು ಹಾಗೂ ಬಂಧುಗಳನ್ನು ಕರೆಯುತ್ತಾರೆ. ಈ ಗುಡಿಯ ಹಬ್ಬಕ್ಕೆ ಸಂಬಂಧಿಸಿದಂತೆ ಯಾವುದೇ ಮಾಂಸ ಬೇಟೆಯಿರುವುದಿಲ್ಲ. ಆದ್ದರಿಂದ ಇಂದಿಗೂ ಬಸವಣ್ಣನ ಗುಡಿಯಲ್ಲಿ ಪೂಜೆ ನಡೆಯುತ್ತದೆ. ಈ ಗುಡಿಯನ್ನು ಕಲ್ಲಿನಿಂದ ಕಟ್ಟಿದ್ದಾರೆ. ಕೆರೆಯಲ್ಲಿನ ನಂಬಿಕೆ ಆಚರಣೆಗೆ ಸಂಬಂಧ ಪಟ್ಟಂತೆ ನೀರನ್ನು ಉಪಯೋಗಿಸಲು ಎಲ್ಲಾರಿಗೂ ಅಧಿಕಾರವಿದೆ. ದೊಡ್ಡ ಆಚರಣೆ ಎಂದರೆ ಕೆರೆಯು ಭರ್ತಿಯಾದಾಗ ಗಂಗ ಅಭಿಷೇಕ ಮಾಡುವರು.

**೫.ವೀರ ಸಮುದ್ರ**

ಕೆರೆಯ ಸ್ಥಳ : ವಂಟಿಗೊಡು

ಕಟ್ಟಿಸಿದವರು : ಬಯಕಾರ ರಾಮಪ್ಪ

ತಾಲೂಕು : ಹೊಸಪೇಟೆ

ದಿಕ್ಕು : ಪೂರ್ವ

ಜಿಲ್ಲೆ : ಬಳ್ಳಾರಿ ಕಾಲ : ಕ್ರಿ.ಶ. ೧೫೩೯

ವಂಟಿಗೊಡು ಕೆರೆಯೆಂದು ಪ್ರಸಿದ್ಧಿಯಾದ ವೀರಸಮುದ್ರ ಇಂದು ತಿಮ್ಮಲಾಪುರಕ್ಕೆ ಹೊಂದಿಕೊಂಡಂತೆ ತಾಂಡದ ಬಳಿ ಈ ಕೆರೆಯಿದೆ. ಈ ಕೆರೆಯನ್ನು ಬಯಕಾರ ರಾಮಪ್ಪನು ತನ್ನ ಪತ್ನಿಯಾದ ವೀರಮ್ಮಳಿಗೆ ಪುಣ್ಯವಾಗಲೆಂದು ಕೆರೆಯನ್ನು ಕಟ್ಟಿಸಿ ಇದಕ್ಕೆ ವೀರ ಸಮುದ್ರ ಎಂದು ನಾಮಕರಣ ಮಾಡಿದ್ದಾನೆ ಎಂದು ಅಲ್ಲಿನ ತೂಬಿನ ಹತ್ತಿರದಲ್ಲಿರುವ ಕಲ್ಲಿನ ಶಾಸನ ತಿಳಿಸುತ್ತದೆ. ಬಯಕಾರ ರಾಮಪ್ಪನ ಕೆರೆಗಳಲ್ಲಿ ಇದು ಕೂಡ ಉತ್ತಮ ರೀತಿಯಲ್ಲಿದೆ. ಇಂದಿಗೂ ಕೂಡ ನೀರನ್ನು ಉಣಿಸುವ ಕಾಯಕದಲ್ಲಿದೆ ತಿಮ್ಮಲಾಪುರದಿಂದ ನಾಲ್ಕು ಕಿ.ಮೀ. ದೂರದಲ್ಲಿದೆ. ಈ ಕೆರೆಯು ಏರಿ, ತೂಬು, ಕೋಡಿಗಳನ್ನು ಹೊಂದಿದೆ. ಈ ಕೆರೆಯ ಏರಿಯು ಎತ್ತರವಾಗಿದ್ದು ಎರಡು ಗುಡ್ಡಗಳಿಗೆ ಹೊಂದಿಕೊಂಡಂತೆ ನಿರ್ಮಾಣ ಮಾಡಲಾಗಿದೆ.[೧೩]

ಆದ್ದರಿಂದಾಗಿ ಸುಭದ್ರ ಸ್ಥಿತಿಯಲ್ಲಿದೆ. ನೀರು ನಿಲ್ಲಲು ವಿಶಾಲವಾದ ಅಂಗಳವಿದ್ದು ಇದು ಊಳುನಿಂದ ತುಂಬಿದೆ. ದೊಡ್ಡದಾದ ಕಲ್ಲುಗಳನ್ನು ಹಾಗೂ ಮಣ್ಣು ಬಳಕೆ ಮಾಡಿದ್ದಾರೆ ಏರಿಯ ಮೇಲೆ ಬಂಡಿ ಹೋಗುವಷ್ಟು ದಾರಿಯಿದೆ. ಏರಿಯಾ ಎಡಭಾಗದಲ್ಲಿ ಒಂದು ಕೋಡಿಯಿದೆ. ಒಮ್ಮೆ ಭರ್ತಿಯಾದರೆ ಒಂದು ಬೆಳೆಯನ್ನು ತೆಗೆಯಬಹುದು. ಒಂದು ತೂಬು ಇದ್ದು ಇದು ಕೂಡ ಅವನತಿಯ ಹಂತದಲ್ಲಿದೆ. ಆದ್ದರಿಂದ ಈ ಕೆರೆಯ ಅಭಿವೃದ್ಧಿಯು ಅತ್ಯವಶ್ಯಕವಾಗಿದೆ ವಿಶಾಲವಾದ ಈ ಕೆರೆಗೆ ನೀರು ಹಳ್ಳ-ಕೊಳ್ಳ, ಬೆಟ್ಟ-ಗುಡ್ಡಗಳಿಂದ ಹಾಗೂ ನಾಣ್ಯಪುರ, ಹೊಸಕೆರೆ, ದಸಮಾಪುರಗಳಿಂದ ನೀರು ಹರಿದು ಬರುತ್ತದೆ. ಹೀಗೆ ಬಂದಂತಹ ನೀರು ಈ ಕೆರೆಯಲ್ಲಿ ಸಂಗ್ರಹಣೆಯಾಗುತ್ತದೆ.

ಈ ಕೆರೆಯ ನೀರನ್ನು ೬೦-೭೦ ಎಕರೆಗಳಿಗೆ ನೀರನ್ನು ಒದಗಿಸುವ ಸಾಮಾರ್ಥ್ಯಯಿದೆ. ಕೆರೆಗೆ ಅಚ್ಚುಕಟ್ಟು ಪ್ರದೇಶ ವಿಶಾಲವಾಗಿದೆ. ಇಂದು ಸ್ಥಳೀಯ ಜನರು ನೀರನ್ನು ಅವಲಂಬಿಸಿದ್ದು ಕೆರೆಯು ಭತ್ತಿರುವ ಕಾರಣ ನಿರಾಶದಾಯಕರಾಗಿದ್ದಾರೆ. ಈ ಅಚ್ಚುಕಟ್ಟು ಪ್ರದೇಶದಲ್ಲಿ ನೆಲಗಡಲೆ, ಜೋಳ, ಭತ್ತ, ಮೆಕ್ಕೆಜೋಳ, ನವಣೆ ಸಜ್ಜೆ, ಸೂರ್ಯಕಾಂತಿ, ಸೌತೆ, ಟಮೋಟ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಈ ಕೆರೆಯು ಭರ್ತಿಯಾದ ನಂತರ ಈ ಕೆರೆಯ ನೀರು ಜಲಕುಂಟಿ, ಚಿಲಕನಹಟ್ಟಿ, ಮಗಿಮಾವಿನಹಳ್ಳಿ, ಹಂಪಪಟ್ಟಣದ ಮುಖಾಂತರ ಡ್ಯಾಂ ತಲುಪುತ್ತದೆ. ವಡ್ಡು ದುಸ್ಥಿತಿಯಲ್ಲಿದೆ ಒಮ್ಮೆ ಹೊಡೆದ ಪುನಃ ಊರಿನ ಗ್ರಾಮಸ್ಥರಿಂದ ಅದನ್ನು ಅಭಿವೃದ್ಧಿ ಮಾಡಲಾಗಿದೆ ಎಂದು ಈ ಕೆರೆಯ ನೀರ್ಗಂಟಿಯಾದ ಹುಲುಗಪ್ಪ ತಿಳಿಸುತ್ತಾರೆ.

ಈ ಕೆರೆಯ ನೀರನ್ನು ಉಪಯೋಗಿಸಲು ಯಾವುದೇ ನಿಯಮಗಳಿಲ್ಲ ತಾಳೆ ಬಸಾಪುರ ತಾಂಡ, ದಸಮಾಪುರಗಳಲ್ಲಿ ನೀರನ್ನು ಕುಡಿಯಲು ಬಳಸುತ್ತಾರೆ. ಕೆರೆಯು ಅಡವಿಯ ಮಧ್ಯದಲ್ಲಿ ಇರುವುದರಿಂದ ಕಾಡು ಪ್ರಾಣಿಗಳ ಅವಳಿ ತುಂಬಾ ಇರುವುದು. ಕರಡಿ, ಚಿರತೆ, ಹಂದಿ, ತೋಳ ಅಂತಹ ಪ್ರಾಣಿಗಳು ಊರಿನ ಗ್ರಾಮಸ್ಥರಿಗೆ ಭಯ ಹುಟ್ಟಿಸಿದೆ. ಆದ್ದರಿಂದ ಈ ಕೆರೆಯ ಹತ್ತಿರ ಬರುವವರ ಸಂಖ್ಯೆ ಅತಿ ವಿರಾಳ. ಬಯಾಕಾರ ರಾಮಪ್ಪನ ಕೆರೆಗಳಲ್ಲಿ ಈ ಕೆರೆಯು ವಿಭಿನ್ನ ಶೈಲಿಯಲ್ಲಿದೆ. ಮುಖ್ಯ ಅಂಶ ಎಂದರೆ ಎರಡು ಗುಡ್ಡಗಳಿಗೆ ಜಂಟಿಮಾಡಲಾಗಿದೆ.

ಕೆರೆಯ ಏರಿಯಾ ಮೇಲೆ ಯಾವುದೇ ದೇವಾಲಯವಿಲ್ಲ. ಆದರೂ ಗ್ರಾಮದ ಹಿರಿಯರು ಕೆರೆಯು ತುಂಬಿದಾಗ ಕೆರೆಗೆ ಶಾಂತಿ ಮಾಡಲು ಗಂಗಮ್ಮನ ಪೂಜೆ ಮಾಡಿಸುತ್ತಾರೆ. ಈ ದಿನ ಊರಿನ ಗ್ರಾಮದ ಜನ ಹಬ್ಬದ ರೀತಿಯಲ್ಲಿ ಸಂಭ್ರಮಿಸಿ ಸಿಹಿ ಮಾಡುತ್ತಾರೆ. ಈ ವಂಟಿಗೊಡು ಕೆರೆಯ ದಂಡೆಯ ಮೇಲೆ ಓಡಕಲ್ಮಮ್ಮ ದೇವಿಯ ಮೂರ್ತಿಯಿದ್ದು. ಇದನ್ನು ಕೆರೆ ತುಂಬಿದಾಗ ಆಚರಣೆ ಮಾಡುತ್ತಾರೆ. ಈ ದೇವಿಯ ಹಬ್ಬದ ದಿನ ಊರಿನ ಗ್ರಾಮದ ಎಲ್ಲಾ ಜನರು ಹೂವಿನಹಾರ, ಕಾಯಿ, ಕರ್ಪೂರದ ಜೊತೆಗೆ ಸೀರೆಯನ್ನು ಉಡಿಸಿ ಹಾಲು ತುಪ್ಪದ ಅಭಿಷೇಕ ಮಾಡುತ್ತಾರೆ.

**೧. ನಡುವಲ ಕೆರೆ**

| | | | |
|---|---|---|---|
| ಕೆರೆಯ ಸ್ಥಳ | : ತಿಮ್ಮಲಾಪುರ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಹೊಸಪೇಟೆ | ದಿಕ್ಕು | : ಉತ್ತರ |
| ಜಿಲ್ಲೆ | : ಬಳ್ಳಾರಿ | ಕಾಲ | : |

ಈ ಕೆರೆಯು ತಿಮ್ಮಲಾಪುರದಿಂದ ನಾಲ್ಕು ಕಿ.ಮೀ. ದೂರದಲ್ಲಿದೆ. ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿರುವ ಜಂಭಯ್ಯನ ಕೆರೆಯ ಪಕ್ಕದಲ್ಲಿ ಬರುತ್ತದೆ. ಇದು ಬಯಕಾರ ರಾಮಪ್ಪನು ಕಟ್ಟಿಸಿದ ಕೆರೆಗಳ ಹೋಲಿಕೆ ಹಾಗೂ ಕೆರೆಯಾ ಏರಿ, ತೂಬು ಕೆರೆಗಳ ಸೌಮ್ಯತೆ ಇರುವುದರಿಂದ ಇದು ಕೂಡ ಈತನ ಕಾಲದ ಕೆರೆ ಎಂಬುದು ಮೇಲ ನೋಟಕ್ಕೆ ತಿಳಿದು ಬರುತ್ತದೆ. ಈ ಕೆರೆಯ ವಿಶೇಷ ಎಂದರೆ ಇದರ ಏರಿಯು ಉತ್ತಮವಾಗಿದ್ದು ಈ ಕೆರೆಯನ್ನು ಯಾರ ಹೆಸರಿಗೆ ಕಟ್ಟಿಸಿರಬಹುದು ಎಂಬುದು ಕುರಿತಂತೆ ಅಧ್ಯಯನ ನಡೆಯಬೇಕಿದೆ. ಈ ಕೆರೆಯು ಸುಮಾರು ೪೦ ರಿಂದ ೫೦ ಎಕರೆಗಳಿಗೆ ನೀರನ್ನು ಒದಗಿಸುವ ಸಾಮರ್ಥ್ಯ ಹೊಂದಿದೆ.[೧೪]

ಈ ಕೆರೆಗೆ ಒಂದು ತೂಬು ಇದೆ. ಇದು ದುಸ್ಥಿತಿಯಲ್ಲಿ ಇರುವುದನ್ನು ಕಾಣುತ್ತೇವೆ. ಈ ತೂಬಿನ ಮೇಲೆ ವಿಜಯ ನಗರ ಕಾಲಕ್ಕೆ ಹೋಲುವಂತಹ ಉಬ್ಬು ಚಿತ್ರಗಳಿವೆ. ಕೋಡಿಯು ಒಂದು ಇದ್ದು ಉತ್ತಮವಾಗಿದೆ. ಈ ಕೆರೆಗೆ ನೀರು ಬೆಟ್ಟ-ಗುಡ್ಡ, ಹಳ್ಳ-ಕೊಳ್ಳಗಳಿಂದ ಹಾಗೂ ಮೊದಲಕೆರೆಯಿಂದ ನೀರು ಸಂಗ್ರಹವಾಗುತ್ತದೆ. ಕೃಷಿಗೆ ನೀರು ಒದಗಿಸಲು ಕಾಲುವೆಗಳಿವೆ. ಈ ನೀರಾವರಿ ವ್ಯವಸ್ಥೆಯಿಂದ ಶೇಂಗಾ, ಭತ್ತ, ಜೋಳ, ಮೆಕ್ಕೆಜೋಳ, ಗೋಧಿ, ನವಣೆ, ಸಜ್ಜೆ, ರಾಗಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕೆರೆಯು ಅಚ್ಚುಕಟ್ಟಾದ ವಿಶಾಲ ಕೆರೆಯ ಅಂಗಳ ಹೊಂದಿದೆ. ಇಲ್ಲಿನ ಮಣ್ಣು ಫಲವತ್ತಾಗಿದ್ದು ಬೆಳೆಗೆ ಅನುಕೂಲವಾಗಿದೆ. ಕೆರೆಯ ಏರಿಯು ೪೩೧ ಮೀ ಉದ್ದ ಇದ್ದು ೧೪ ಮೀ ಅಗಲವಾಗಿದೆ. ಈ ಕೆರೆಯು ಭರ್ತಿಯಾದ ನಂತರ ಇಲ್ಲಿನ ನೀರು ಚಿಲಕನಹಟ್ಟಿ, ಮಗಿಮಾವಿನಹಳ್ಳಿ, ಹಂಪಪಟ್ಟಣದ ಮುಖಾಂತರ ತುಂಗಾಭದ್ರ ಜಲಾಶಯ ಸೇರುತ್ತದೆ. ಈ ಕೆರೆಯ ದಂಡೆಯ ಮೇಲೆ ಯಾವುದೇ ದೇವಾಲಯ ಇಲ್ಲ. ಆದರು ಕೆರೆಯು ತುಂಬಿ ಕೋಡಿ ಬಿದ್ದಾಗ ಗಂಗೆ ಪೂಜೆ ಮಾಡಿ ಶಾಂತಿ ಮಾಡಿಸುವ ಆಚರಣೆ ಕಾಣುತ್ತೇವೆ.

**೨. ಅಮ್ಮ ಸಮುದ್ರಂ**

| | | | |
|---|---|---|---|
| ಕೆರೆಯ ಸ್ಥಳ | : ಹಾರವನಹಳ್ಳಿ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಹೊಸಪೇಟೆ | ದಿಕ್ಕು | : ಉತ್ತರ |
| ಜಿಲ್ಲೆ | : ಬಳ್ಳಾರಿ | ಕಾಲ | : ಕ್ರಿ.ಶ. ೧೫೩೯ |

ಈ ಕೆರೆಯಲ್ಲಿ ತುಂಡಾಗಿರುವ ಶಾಸನವು ಆರಂಭದಲ್ಲಿ ಕಾಲವನ್ನು ಉಲ್ಲೇಖಿಸಿರುವ ಈ ಮೇಲಿನ ಶಾಸನವು ಮುಖ್ಯವಾಗಿ ಕ್ರಿ.ಶ.೨೬-೦೮-೧೫೩೯ರಂದು ಬಯಕಾರ ರಾಮಪ್ಪಯ್ಯನು ತನ್ನ ಚಿಕ್ಕಪ್ಪ ಬಾಚರಸಯ್ಯನ ಹೆಂಡತಿಯಾದ ಅಂಮಮ್ಮನ ಹೆಸರಿನಲ್ಲಿ ಅಂಮಸಮುದ್ರವೆಂಬ ಕೆರೆ ಕಟ್ಟಿಸಿದ ವಿವರವನ್ನು ಉಲ್ಲೇಖಿಸುತ್ತದೆ. ಪ್ರಾಯಶಃ ಇದೇ ಕೆರೆಯನ್ನೇ ಅಂದು ಅಂಮ ಸಮುದ್ರ ಎಂದು ಕರೆದಿರುವ ಸಾಧ್ಯತೆ ಇದೆ. ಶಾಸನದ ಅನಂತರದ ಭಾಗದಲ್ಲಿ ಶೈವ ಪ್ರಾರ್ಥನಾ ಶ್ಲೋಕವಿದ್ದು, ಅದರ ಮುಂದಿನ ಭಾಗದಲ್ಲಿ ಬಯಕಾರ ರಾಮಪ್ಪನ ವಂಶಾವಳಿ ಹಾಗೂ ತಿಮ್ಮಾಲಾಪುರದ ಅಗ್ರಹಾರದ ವರ್ಣನೆ ಇದೆ.[೧೫]

ಇದೆ ಕೆರೆಯ ತೂಬಿನ ಬಳಿ ಬಿದ್ದಿರುವ ಶಾಸನದ ಎರಡನೆಯ ತುಂಡು ಶಾಸನದಲ್ಲಿ ಬಯಕಾರ ರಾಮಪ್ಪಯ್ಯನ ಬಿರುದುಗಳು ಮತ್ತು ಆತನ ಗುಣ ವಿಶೇಷಗಳನ್ನು ಹಾಗೂ ಆತನ ಕಾಲಾವಧಿಯಲ್ಲಿ ಕಟ್ಟಿಸಿದ ಕೆರೆ ಮತ್ತು ಅಗ್ರಹಾರಗಳ ವರ್ಣನೆಯನ್ನು ವಿಶೇಷವಾಗಿ ಉಲ್ಲೇಖಿಸುತ್ತದೆ.

ಇದರ ಉಳಿದ ವರ್ಣನೆಯ ವಿವರಗಳು ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ ಳನೆಯ ಶಾಸನದಲ್ಲಿರುವ ವಿವರಗಳನ್ನೇ ಹೊಂದಿದೆ. ಅದೇ ರೀತಿಯಾಗಿ ಈ ಕೆರೆಗೆ ಏರಿ, ಕೋಡಿ ತೂಬು ಇದೆ. ಏರಿಯನ್ನು ಕಲ್ಲು ಮತ್ತು ಮಣ್ಣು ಬಳಕೆಯಿಂದ ನಿರ್ಮಾಣ ಮಾಡಲಾಗಿದ್ದು ಇದು ೬೯೩ ಮೀ ಉದ್ದ ಇದ್ದು ೧೪ ಮೀ ಅಗಲವಾಗಿದೆ ಉತ್ತಮ ಹಂತದಲ್ಲಿದೆ. ಈ ಕೆರೆಯ ಏರಿಯು ವಿಸ್ತಾರವಾಗಿದ್ದು ಮೇಲೆ ಎತ್ತಿನಬಂಡಿ ಹೋಗುವಷ್ಟು ದಾರಿಯಿದೆ.

ಕೆರೆಗೆ ಎರಡು ಕೋಡಿಗಳಿವೆ ಇವು ಮಳೆ ಬಂದು ಕೆರೆ ತುಂಬಿದಾಗ ನೀರು ಹರಿಯಲು ವ್ಯವಸ್ಥಿತವಾಗಿ ನಿರ್ಮಾಣ ಮಾಡಲಾಗಿದೆ. ಇವು ಇಂದು ಅವನತಿಯ ಅಂಚಿನಲ್ಲಿವೆ. ಬಯಕಾರ ರಾಮಪ್ಪನ ಕಾಲದಲ್ಲಿ ಈ ಕೋಡಿಗಳ ನಿರ್ಮಾಣ ವಿಶೇಷವಾಗಿವೆ. ಉಳಿದಂತೆ ಕೆರೆಗೆ ಎರಡು ತೂಬುಗಳಿದ್ದು ಇವು ಹಾಳಾದ ಸ್ಥಿತಿಯಲ್ಲಿವೆ. ಕೆರೆಗಳಿಗೆ ತೂಬುಗಳ ಅವಶ್ಯಕತೆ ಅತಿ ಪ್ರಮುಖವಾದ ಕಾರಣ ಇವುಗಳ ಅಭಿವೃದ್ಧಿ ಮುಖ್ಯ. ನೀರಾವರಿಗೆ ಸಂಬಂಧಿಸಿದಂತೆ ಸಣ್ಣ ಪುಟ್ಟ ಕಾಲುವೆಗಳಿದ್ದು ಕೃಷಿಗೆ ಅನುಕೂಲಕರವಾಗಿವೆ. ಈ ಕೆರೆಯು ಸುಮಾರು ೭೦-೮೦ ಎಕರೆಗಳಿಗೆ ನೀರನ್ನು ಒದಗಿಸುವ ಸಾಮರ್ಥ್ಯ ಹೊಂದಿದೆ. ಈ ಕೆರೆಗೆ ನೀರು ಯಾವುದೇ ಕೆರೆಗಳಿಂದ ಬರುವುದಿಲ್ಲ ಬೆಟ್ಟ-ಗುಡ್ಡ, ಹಳ್ಳ-ಕೊಳ್ಳಗಳ ನೀರು ಈ ಕೆರೆಗೆ ಆಧಾರ. ಇಲ್ಲಿ ಭರ್ತಿಯಾದ ನೀರು ಚಿಲಕನಹಟ್ಟಿ, ಮಗಿಮಾವಿನಹಳ್ಳಿ ಮುಖಾಂತರ ಹಂಪಪಟ್ಟಣದ ಮಾರ್ಗವಾಗಿ ತುಂಗಾಭದ್ರ ಜಲಾಶಯ ಸೇರುತ್ತದೆ.

ಈ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ಕಬ್ಬು, ನೆಲ್ಲು, ಶೇಂಗಾ, ಜೋಳ, ಮೆಕ್ಕೆಜೋಳ, ರಾಗಿ, ಹಲಸಂಧಿ, ಸಜ್ಜೆ, ಭತ್ತ ಇತ್ಯಾದಿ ಬೆಳೆಗಳನ್ನು ಬೆಳೆಯುವರು. ಈ ಕೆರೆಯ ದಂಡೆಯ ಮೇಲೆ ವಿವಿಧ ದೇವಾಲಯಗಳನ್ನು ಕಾಣುತ್ತೇವೆ. ಅವುಗಳಲ್ಲಿ ವಿಶೇಷವಾಗಿ ಆಂಜನೇಯ ದೇವಸ್ಥಾನ, ಕನ್ನಿರಮ್ಮ ದೇವಾಸ್ಥಾನಗಳಿವೆ. ಈ ದೇವಾಲಯಗಳಿಗೆ ಇಂದಿಗೂ ಪೂಜೆ ನಡೆಯುತ್ತದೆ. ಈ ಕೆರೆಯಲ್ಲಿ ಮಹಾನವಮಿ ಹಬ್ಬದ ದಿನ ತೆಪ್ಪಗಳನ್ನ ಬೀಡುವ ಆಚರಣೆಯಿದೆ. ಕೆರೆಯು ತುಂಬಿದಾಗ ಗಂಗಾಪೂಜೆ, ವಿಶೇಷ ಅಭಿಷೇಕವಾದ ಹಬ್ಬಗಳನ್ನ ಮಾಡುತ್ತಾರೆ.

**೮. ಚಿಲಕನಹಟ್ಟಿ ಕೆರೆ**

ಕೆರೆಯ ಸ್ಥಳ : ಚಿಲಕನಹಟ್ಟಿ

ತಾಲೂಕು : ಹೊಸಪೇಟೆ

ಜಿಲ್ಲೆ : ಬಳ್ಳಾರಿ

ಕಟ್ಟಿಸಿದವರು : ಬಯಕಾರ ರಾಮಪ್ಪ

ದಿಕ್ಕು : ಉತ್ತರ

ಕಾಲ : -

ಈ ಕೆರೆಗೆ ಸಂಬಂಧಿಸಿದಂತೆ ಯಾವುದೇ ಶಾಸನ ದೊರೆತಿಲ್ಲ ಆದರೆ ಬಯಕಾರ ರಾಮಪ್ಪ ಕಟ್ಟಿಸಿದ ಕೆರೆಗಳು ಒಂದಕ್ಕೊಂದು ಜಂಟಿಯಾಗಿರುವುದರಿಂದ ಹಾಗೂ ಆತನ ಹಲವು ಕೆರೆಗಳ ನೀರು ಈ ಕೆರೆಗೆ ಸರಬರಾಜು ಹಾಗುತ್ತವೆ. ಅದೇ ರೀತಿ ಭರ್ತಿಯಾದ ನೀರು ಮಗಿಮಾವಿನಹಳ್ಳಿಕೆರೆಗೆ ಹೋಗುತ್ತವೆ. ಈ ಗ್ರಾಮದ ಕನಕಪ್ಪನ ಹೊಲದಲ್ಲಿರುವ ಶಾಸನವು ೧೫೫೯ ರಲ್ಲಿ ಬಯಕಾರ ರಾಮಪ್ಪನ ಪತ್ನಿಯಾದ ವೀರಮ್ಮನು ತನ್ನ ಹೆಸರಿನಲ್ಲಿ ತೋಪೊಂದು ನಡೆಸಿದ ವಿವರವನ್ನು ಉಲ್ಲೇಖಿಸುತ್ತದೆ ಮತ್ತು ಮಾರುತಿ ದೇವಾಲಯದಲ್ಲಿರುವ ಶಾಸನ ೧೫೫೯ ರಲ್ಲಿ ಬಯಕಾರ ರಾಮಪ್ಪಯ್ಯನು ತನ್ನ ಹೆಸರಿನಲ್ಲಿ ತೋಪೊಂದನ್ನು ನಡೆಸಿದ ವಿವರವಿದೆ. ಬಯಕಾರ ರಾಮಪ್ಪನು ತನ್ನ ಮಗಳ ಹೆಸರಿನಲ್ಲಿ ಲಖಿರಿಸಂಮನಿಗೆ ಪುಣ್ಯವಾಗಲಿಯೆಂದು ಮಂಟಪ, ಬಾವಿ, ಅರವಟಿಕೆಗಳನ್ನು ಮಾಡಿಸುತ್ತಾನೆ. ಜೊತೆಗೆ ಲಕ್ಷ್ಮೀದೇವಿಯನ್ನು ಪ್ರತಿಷ್ಠಾಪಿಸುತ್ತಾನೆ. ಬಯಕಾರ ರಾಮಪ್ಪನ ಕಾಲಾವಧಿಯಲ್ಲಿ ನಿರ್ಮಾಣಗೊಂಡಿರಬಹುದಾದ ಈ ಕೆರೆಯನ್ನು ಜಾಲಿಕುಂಟೆಕೆರೆ, ಜಾಲಿಕುಂಟೇಪ್ಪನಕೆರೆ ಎಂದು ಕೆರೆಯುವುದು ವಾಡಿಕೆಯಿದೆ. ಇಂದು ಉತ್ತಮ ಸ್ಥಿತಿಯಲ್ಲಿದೆ.[೧೬]

ಕೆರೆಯು ಏರಿ, ಎರಡು ಕೋಡಿ, ಎರಡು ತೂಬುಗಳನ್ನು ಒಳಗೊಂಡಿದೆ. ಏರಿಯನ್ನ ಕಲ್ಲು ಮತ್ತು ಬಂಡೆಗಳ ಮೂಲಕ ದಪ್ಪವಾಗಿ ಮಣ್ಣನ್ನು ಉಪಯೋಗಿಸಿ ನಿರ್ಮಿಸಿದ್ದಾರೆ. ಈ ಕೆರೆಗೆ ಏಳು ಕಡೆಯಿಂದ ನೀರು ಬರುತ್ತವೆ. ಅವುಗಳೆಂದರೆ ಪೋತಲಕಟ್ಟೆ ಕೆರೆ, ಜಂಭಯ್ಯನಕೆರೆ, ನಡುವಲಕೆರೆ, ಡಪ್ಪದೋಣಿಯಕೆರೆ, ಒಡಲಕೆರೆ, ವಂಟಿಗೋಡು ಕೆರೆಗಳಿಂದ ನೀರು ಸಂಗ್ರಹಣೆ ಆಗುತ್ತದೆ. ಕೆರೆ ಭರ್ತಿಯಾದ ಬಳಿಕ ಇಲ್ಲಿನ ನೀರು ಮಗಿಮಾವಿನಹಳ್ಳಿಯ ಹಿರೇಕೆರೆಗೆ ಹರಿಯುತ್ತವೆ. ಅಚ್ಚುಕಟ್ಟು ಪ್ರದೇಶವು ವಿಶಾಲವಾಗಿದ್ದು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾದ ವಾತವರಣ ಇರುವುದನ್ನು ಕಾಣಬಹುದು. ಮುಖ್ಯವಾಗಿ ಈ ಪ್ರದೇಶದಲ್ಲಿ ಜೋಳ, ಶೇಂಗಾ, ಮೆಕ್ಕೆಜೋಳ, ಸಜ್ಜೆ, ರಾಗಿ, ಭತ್ತ ಇತ್ಯಾದಿ ಬೆಳೆಗಳನ್ನು ಪ್ರಮುಖವಾಗಿ ಬೆಳೆಯುತ್ತಾರೆ. ನೀರಾವರಿಗೆ ಸಂಬಂಧಿಸಿದಂತೆ ೭೦-೮೦ ಎಕರೆಗೆ ನೀರನ್ನು ಒದಗಿಸುವ ಸಾಮರ್ಥ್ಯ ಈ ಕೆರೆಗೆ ಇದೆ. ಇಲ್ಲಿನ ನೀರನ್ನು ಕೃಷಿಗೆ ಬಳಸಲಾಗುತ್ತಿದ್ದು ವವ್ಯಸಾಯಕ್ಕೆ ಅನುವು ಅಗಲಿ ಎಂದು ಸಣ್ಣ ಪುಟ್ಟ ಕಾಲುವೆಗಳನ್ನು ನಿರ್ಮಾಣ ಮಾಡಿದ್ದಾರೆ.

ಈ ಕೆರೆಗೆ ಸಂಬಂಧಿಸಿದಂತೆ ನೀರು ತುಂಬಿ ಕೋಡಿ ಬಿದ್ದಾಗ ಗಂಗಾಭಿಷೇಕ ಮಾಡಿಸುತ್ತಾರೆ. ಗಂಗಾಪೂಜೆ ವಿಶೇಷವಾಗಿ ಮಾಡುತ್ತಾರೆ. ದಂಡೆಯ ಮೇಲೆ ಬಳ್ಳಾರಿ ದುರುಗಮ್ಮ ದೇವಾಸ್ಥಾನ ಇರುವುದು. ಈ ದೇವಿಗೆ ಜಾತ್ರೆಯನ್ನು ಮಾಡುತ್ತಾರೆ. ಜಾತ್ರೆಯ ದಿವಸ ಪ್ರಾಣಿಗಳನ್ನು ಬಲಿಕೊಡುವ ಆಚರಣೆ ಕಾಣುತ್ತೇವೆ. ಕೆರೆಯ ಪಕ್ಕದಲ್ಲಿ ಆಂಜಿನೇಯ್ಯನ ಮೂರ್ತಿಯಿದೆ.

ಇದನ್ನ ಜಾಲಿ ಕುಂಟೆಪ್ಪ ಎಂದು ಸ್ಥಳೀಯರು ಕರೆಯುತ್ತಾರೆ. ಈ ಆಂಜಿನೇಯ್ಯ ಮೂರ್ತಿಗೆ ಸಂಬಂಧಪಟ್ಟಂತೆ ವರ್ಷಕ್ಕೆ ಒಂದು ಬಾರಿ ಉತ್ಸವ ಮಾಡುತ್ತಾರೆ.

**೯. ಗೊಲ್ಲರಹಳ್ಳಿ ಕೆರೆ**

| | | | |
|---|---|---|---|
| ಕೆರೆಯ ಸ್ಥಳ | : ಗೊಲ್ಲರಹಳ್ಳಿ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಹೊಸಪೇಟೆ | ದಿಕ್ಕು | : ಉತ್ತರ |
| ಜಿಲ್ಲೆ | : ಬಳ್ಳಾರಿ | ಕಾಲ | : ಕ್ರಿ.ಶ. ೧೫೫೬ |

ಗೊಲ್ಲರಹಳ್ಳಿ ಕೆರೆಕಟ್ಟೆಯ ಬಳಿಯಿರುವ ಶಾಸನವು ಶಾಲಿ ವಾಹನ ಶಕವರುಷ ೧೪೭೮ ನೆಯ ನಳ ಸಂವತ್ಸರ, ವೈಶಾಖ, ಶು.೩ಕ್ಕೆ ಸರಿಯಾದ ಕ್ರಿ.ಶ.೧೫೫೬ರಲ್ಲಿ ಈ ಕೆರೆಯನ್ನು ಬಯಕಾರ ರಾಮಪ್ಪನು ತನ್ನ ಹೆಸರಿನಲ್ಲಿ ಕಟ್ಟಿಸಿರುವುದರ ಬಗ್ಗೆ ಉಲ್ಲೇಖ ಇದೆ. ಕೆರೆಗಳಿಗೆ ಸಂಬಂಧಿಸಿದಂತೆ ಬಯಕಾರ ರಾಮಪ್ಪನು ಕುಟುಂಬಸ್ಥರಿಗೆ ಮತ್ತು ಸಂಬಂಧಿಕರಿಗೆ ಕೆರೆ ಕಟ್ಟಿಸಿದ್ದನ್ನು ಕಾಣುತ್ತೇವೆ. ಇದೇ ಮೊದಲ ಬಾರಿಗೆ ತನ್ನ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿದ್ದರ ಬಗ್ಗೆ ಉಲ್ಲೇಖ ಕಾಣುತ್ತೇವೆ. ಈ ಕೆರೆಯು ರಾಷ್ಟ್ರೀಯ ಹೆದ್ದಾರಿಯಿಂದ ೫ ಕಿ.ಮೀ ದೂರದಲ್ಲಿದ್ದು ಇದು ಇಂದು ಉತ್ತಮವಾಗಿದೆ.[೧೭]

ಈ ಕೆರೆಗೆ ಅಚ್ಚುಕಟ್ಟಾದ ಏರಿ ಇದೆ. ಎರಡು ಕೋಡಿ, ಒಂದು ತೂಬು ಇರುವುದು ಕಂಡುಬರುತ್ತದೆ. ಏರಿಯೂ ಕಲ್ಲುಗೊಡೆಯಿಂದ ನಿರ್ಮಾಣಗೊಂಡಿದ್ದು ಎರಡು ಗುಡ್ಡಗಳಿಗೆ ಜಂಟಿ ಮಾಡಲಾಗಿದೆ. ಕೆರೆಗೆ ನೀರು ಹಳ್ಳ-ಕೊಳ್ಳ, ಬೆಟ್ಟ-ಗುಡ್ಡಗಳಿಂದ ಬರುತ್ತವೆ. ಯಾವುದೇ ಕೆರೆಯಿಂದಾಗಲಿ ನೀರು ಸರಬರಾಜು ಇಲ್ಲ. ಕೆರೆ ಭರ್ತಿಯಾದ ಬಳಿಕ ಇಲ್ಲಿನ ನೀರು ಡಣಾಯಕನಕೆರೆಗೆ ಹೋಗುತ್ತವೆ. ನೀರಾವರಿಗೆ ಯೋಗ್ಯವಾದ ಅಚ್ಚುಕಟ್ಟಾದ ಪ್ರದೇಶವನ್ನು ಹೊಂದಿದೆ. ಮೂರು ಪ್ರಧಾನವಾದ ಕಾಲುವೆ ಮತ್ತು ಇತರೆ ಚಿಕ್ಕ ಪುಟ್ಟ ಕಾಲುವೆಗಳ ಮುಖಾಂತರ ವ್ಯವಸಾಯಕ್ಕೆ ನೀರನ್ನು ಒದಗಿಸಲಾಗುವುದು. ಒಮ್ಮೆ ಭರ್ತಿಯಾದರೆ ಕನಿಷ್ಟ ಎರಡು ಬೆಳೆಗಳನ್ನು ತೆಗೆಯಬಹುದು ಎಂದು ಸ್ಥಳೀಯರ ಅಭಿಪ್ರಾಯ. ಕೆರೆಯ ಅಂಗಳ ವಿಶಾಲವಾಗಿದೆ.

ಈ ಪ್ರದೇಶದಲ್ಲಿ ಮುಖ್ಯವಾಗಿ ಜೋಳ, ಶೇಂಗಾ, ನೆಲ್ಲು. ಮೆಕ್ಕೆಜೋಳ, ಭತ್ತ, ಕಬ್ಬು, ಹತ್ತಿ, ತರಕಾರಿಗಳನ್ನು ಬೆಳೆಯಲು ಯೋಗ್ಯವಾದ ಮಣ್ಣು ಈ ಅಚ್ಚುಕಟ್ಟು ಪರಿಸರದಲ್ಲಿ ಕಂಡುಬರುತ್ತದೆ. ಕೆರೆಯ ನೀರನ್ನು ಸುಮಾರು ೩೦೦ ಎಕರೆಗಳಿಗೆ ವ್ಯವಸಾಯಕ್ಕೆ ಬಳಸುತ್ತಾರೆ. ಕೆರೆಯು ಭರ್ತಿಯಾದಾಗ ಗಂಗಾಪೂಜೆ, ತೆಪ್ಪ ನೆಡೆಸುವ ಆಚರಣೆ ಮಾಡುತ್ತಾರೆ.

ದಂಡೆಯ ಮೇಲೆ ಮೊದಲು ಗ್ರಾಮದ ವಾಸವಿದ್ದು ಇದನ್ನು ಬಸವನದುರ್ಗ (ಹಾಳೂರು) ತದನಂತರ ಬೇರೆ ಕಡೆಗೆ ವರ್ಗವಣೆಯಾಗಿದೆ. ವಿವಿಧ ದೇವಸ್ಥಾನಗಳಿದ್ದು. ಅವುಗಳಲ್ಲಿ ಪ್ರಮುಖವಾಗಿ ಭರಮಪ್ಪ, ಆಂಜಿನೇಯ್ಯ, ಮಲಿಯಮ್ಮ, ಈಶ್ವರ, ತಾಯಮ್ಮ ದೇವಾಸ್ಥಾನಗಳಿವೆ. ಆಂಜಿನೇಯ್ಯ ದೇವಸ್ಥಾನಕ್ಕೆ ಸಂಬಂಧಿಸಿದಂತೆ ಎರಡು ಜಾತ್ರೆಗಳನ್ನು ಮಾಡುವುರು. ಮಲಿಯಮ್ಮ ದೇವಿಯ ಹಬ್ಬವನ್ನು ಮೂರು ವರ್ಷಕ್ಕೊಮ್ಮೆ ಆಚರಣೆ ಮಾಡುತ್ತಿದ್ದು ಹಬ್ಬದ ದಿನ ಬೇಟೆ ಕಡಿಯುತ್ತಾರೆ. ತಾಯಮ್ಮದೇವಿಗೆ ಸಂಬಂಧಿಸಿದಂತೆ ಹಬ್ಬವನ್ನು ವರ್ಷ ಆಚರಣೆ ಮಾಡುತ್ತಾರೆ, ಜೊತೆಗೆ ಹಬ್ಬದ ದಿವಸ ಕುಂಭ ತರುವಾಗ ವಿವಿಧ ಆಚರಣೆ ಮತ್ತು ನೈವೇದ್ಯ ಮಾಡುತ್ತಾರೆ. ಮುಖ್ಯವಾಗಿ ಈ ಸಂಭ್ರಮಕ್ಕೆ ಊರಿನ ಗ್ರಾಮಸ್ಥರ ಜೊತೆಗೆ ಸುತ್ತಮುತ್ತಲಿನ ಗ್ರಾಮಸ್ಥರು ಭಾಗವಹಿಸುತ್ತಾರೆ.

**೧೦. ಚಿಕ್ಕ ಲಕ್ಕಸಮುದ್ರ**

| | | | |
|---|---|---|---|
| ಕೆರೆಯ ಸ್ಥಳ | : ಮಗಿಮಾವಿನಹಳ್ಳಿ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಹಗರಿಬೊಮ್ಮನಹಳ್ಳಿ | ದಿಕ್ಕು | : ಉತ್ತರ |
| ಜಿಲ್ಲೆ | : ಬಳ್ಳಾರಿ | ಕಾಲ | : ಕ್ರಿ.ಶ. ೯.೨.೧೫೪೪ |

ಈ ಕೆರೆಯ ಬಗ್ಗೆ ಶಾಸನವು ಈ ರೀತಿ ಹೇಳಿದೆ. ಶಾಲಿವಾಹನ ಶಕವರ್ಷ ೧೪೬೬ನೆಯ ಕ್ರೋಧಿ, ಮಾಘ, ಶು.೧೫ಕ್ಕೆ ಸರಿಹೊಂದುವ ಕ್ರಿ.ಶ.೯.೨.೧೫೪೪ರಲ್ಲಿ ಬಯಕಾರ ರಾಮಪ್ಪಯ್ಯ ತಮ್ಮ ಮಗಳು ಲಖರಸಮ್ಮನಿಗೆ ಪುಣ್ಯವಾಗಲಿ ಎಂದು ಈ ಕೆರೆಯನ್ನು ಕಟ್ಟಿಸಿದ್ದಾನೆ. ಉಳಿದಂತೆ ಈ ಶಾಸನದ ವಿವರ ಸಂಡೂರು ತಾಲೂಕಿನ ಚಿಕ್ಕಕೆರೆಯಾಗಿನಹಳ್ಳಿಯ ಕ್ರಸಂ.೧೩ನೆಯ ಶಾಸನದಂತಿದೆ.

ಈ ಕೆರೆಯು ಇಂದು ಉತ್ತಮವಾಗಿದ್ದು ಇಂದು ಸಾವಿರಾರು ಜನರಿಗೆ ನೀರನ್ನು ಉಣಿಸುವ ಮೂಲ ಕೆರೆಯಾಗಿದೆ. ಕೆರೆಯು ಏರಿ, ತೂಬು, ಕೋಡಿಯನ್ನು ಹೊಂದಿದೆ. ವಿಶಾಲವಾದ ಅಂಗಳ, ಅಚ್ಚುಕಟ್ಟು ಪ್ರದೇಶ, ನೀರಾವರಿಗೆ ಹೇಳಿ ಮಾಡಿಸಿದಂತೆ ಇದೆ. ಬಯಕಾರ ರಾಮಪ್ಪನ ಕೆರೆಗಳಲ್ಲಿ ಇದು ಪ್ರಮುಖವಾದದ್ದು ಏಕೆಂದರೆ ಈ ಕೆರೆಗೆ ಏಳು ಕೆರೆಯ ನೀರು ಸೇರುತ್ತವೆ. ಅವುಗಳೆಂದರೆ, ಹುಲಿಕುಂಟೆ ಕೆರೆ, ಜಂಭಯ್ಯನ ಕೆರೆ, ನಡುವಲಕೆರೆ, ವಂಟಿಗೂಡುಕೆರೆ, ಹಾರವನಹಳ್ಳಿ ಕೆರೆ, ಚಿಲಕನಹಟ್ಟಿ ಕೆರೆ, ಜಾಲಿಕುಂಟೆ ಕೆರೆ. ಈ ಕೆರೆಯ ಏರಿಯನ್ನು ಅಲ್ಲೇ ಸೀಗುವಂತ ಕಾಡುಗಲ್ಲುಗಳ ಮುಖಾಂತರ ಗೋಡೆಯ ರೀತಿಯಲ್ಲಿ ನಿರ್ಮಾಣ ಮಾಡಲಾಗಿದೆ. ಈ ಕೆರೆಗೆ ಒಂದು ತೂಬು ಇದೆ, ಮಳೆಯಿಲ್ಲದ ಕಾರಣ ಇಂದು ಮುಚ್ಚಲಾಗಿದೆ. ಉಳಿದಂತೆ ಒಂದು ಕೋಡಿಯಿದೆ. ಇಲ್ಲಿ ಕೆರೆ ಭರ್ತಿಯಾದ ಬಳಿಕ ಈ ನೀರು ಹಂಪಪಟ್ಟಣದ ಮೂಲಕ ತುಂಗಾಭದ್ರ ಜಲಾಶಯಕ್ಕೆ ಹರಿಯುತ್ತದೆ.

ಈ ಪ್ರದೇಶದ ಅಚ್ಚುಕಟ್ಟು ಪ್ರದೇಶ ಬೆಳೆಗಳಿಗೆ ಯೋಗ್ಯವಾಗಿದ್ದು ಈ ವಾತಾವರಣದಲ್ಲಿ ಶೇಂಗಾ, ಭತ್ತ, ಗೋಧಿ. ರಾಗಿ, ಜೋಳ, ಮೆಕ್ಕೆಜೋಳ, ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ.

೧೧. **ಕಾಮಸಮುದ್ರ**

| | | | |
|---|---|---|---|
| ಕೆರೆಯ ಸ್ಥಳ | : ಮಗಿಮಾವಿನಹಳ್ಳಿ | ಕಟ್ಟಿಸಿದವರು | : ಬಯಕಾರ ರಾಮಪ್ಪ |
| ತಾಲೂಕು | : ಹಗರಿ ಬೊಮ್ಮನಹಳ್ಳಿ | ದಿಕ್ಕು | : ಉತ್ತರ |
| ಜಿಲ್ಲೆ | : ಬಳ್ಳಾರಿ | ಕಾಲ | : ಕ್ರಿ.ಶ. ೧೫೫೪ |

ಈ ಕೆರೆಯು ಮಗಿಮಾವಿನಹಳ್ಳಿಯಲ್ಲಿದ್ದು ಇದನ್ನು ಬಯಕಾರ ರಾಮಪ್ಪನು ತನ್ನ ಮಗಳು ಕಾಮಮ್ಮನಿಗೆ ಪುಣ್ಯವಾಗಲಿ ಎಂದು ಕಾಮಸಮುದ್ರ ಕೆರೆಯನ್ನು ಕಟ್ಟಿಸಿದನೆಂದು ಗ್ರಾಮದ ಹಿರೆಕೆರೆಯ ದಂಡೆಯ ಮೇಲೆ ನಿಲ್ಲಿಸಿರುವ ಕಲ್ಲಿನ ಮೇಲೆನ ಶಾಸನ ತಿಳಿಸುತ್ತದೆ. ಶಕ ೧೪೭೬, ಕ್ರೋಧಿ, ಮಾಘ ಶು.೧೫=ಕ್ರಿ.ಶ.೧೫೫೪, ಮಾರ್ಚ್ ೯, ಆದಿತ್ಯವಾರ ಎಂದು ಉಲ್ಲೇಖ ಇದೆ. ಪ್ರಾಯಶಃ ಬಯಕಾರ ರಾಮಪ್ಪನು ಈ ಎರಡು ಕೆರೆಗಳನ್ನ ಮಗಿಮಾವಿನಹಳ್ಳಿಯಲ್ಲಿ ಕಟ್ಟಿಸಿದ್ದಕ್ಕೆ ಇರುವಂತಹ ಬಲವಾದ ಆಧಾರ ಈ ಶಾಸನಗಳು.

ಈ ಒಂದು ಕೆರೆಯನ್ನು ಹಿರೇಕೆರೆ ಎಂದು ಕರೆಯುವುದು ವಾಡಿಕೆಯಿದೆ. ಕಾರಣ ಈ ಕೆರೆಗೆ ಎಲ್ಲಾ ಕೆರೆಗಳಿಂದ ನೀರು ಬರುತ್ತವೆ. ಈ ಕೆರೆಗೆ ಒಂದು ತೂಬು, ಒಂದು ಕೋಡಿ, ಏರಿ, ವಿಶಾಲ ಅಂಗಳ, ಅಚ್ಚುಕಟ್ಟು ಪ್ರದೇಶವಿದ್ದು ವ್ಯವಸಾಯಕ್ಕೆ ಅನುವು ಮಾಡುವ ನಿಟ್ಟಿನಲ್ಲಿ ಈ ಕೆರೆಯನ್ನಾಗಿ ಆಗಿ ಕಾಲಕ್ಕೆ ಉತ್ತಮ ಕಾಲುವೆಗಳ ಮುಖಾಂತರ ಉತ್ತಮ ರೀತಿಯಲ್ಲಿ ಕಟ್ಟಿದ್ದಾರೆ. ಈ ಒಂದು ಕೆರೆಗೆ ಏರಿಯನ್ನು ಕಾಡಗಲ್ಲುಗಳನ್ನು ಬಳಸಿಕೊಂಡು ಗೋಡೆಯ ರೀತಿಯಲ್ಲಿ ಕಟ್ಟಲಾಗಿದೆ. ಈ ಕೆರೆಯ ಅಂಗಳ ವಿಶಾಲವಾಗಿದ್ದು ನೀರಾವರಿಗೆ ಪ್ರಯೋಜನವಾಗಿದೆ.

ಕೃಷಿ, ಒಣಬೇಸಾಯ ಮಾಡುವವರಿಗೆ ಸಣ್ಣ ಪುಟ್ಟ ಕಾಲುವೆಗಳ ಮುಖಾಂತರ ನೀರನ್ನು ಸರಬರಾಜು ಮಾಡಲಾಗುತ್ತದೆ. ಈ ಪ್ರದೇಶದಲ್ಲಿ ಹೆಚ್ಚು ಜೋಳ, ರಾಗಿ, ಸಜ್ಜೆ, ನವಣೆ, ಮೆಕ್ಕೆಜೋಳ, ಶೇಂಗಾ ತರಕಾರಿಗಳನ್ನು ಬೆಳೆಯುತ್ತಾರೆ. ಇಲ್ಲಿನ ಫಲವತ್ತಾದ ಮಣ್ಣು ವ್ಯವಸಾಯಕ್ಕೆ ಸೂಕ್ತ ರೀತಿಯಲ್ಲಿದೆ. ಇಂದು ಮಳೆಯಿಲ್ಲದೆ ಬರಿದಾಗಿದೆ. ಇಲ್ಲಿ ಭರ್ತಿಯಾದ ನೀರು ಹಂಪಪಟ್ಟಣಕ್ಕೆ ಹೋಗುತ್ತವೆ.

## ೧೨. ಪೆದ್ದ ತಿಮ್ಮಸಮುದ್ರ

ಕೆರೆಯ ಸ್ಥಳ : ನಂದಿಬಂಡೆ — ಕಟ್ಟಿಸಿದವರು : ಬಯಕಾರ ರಾಮಪ್ಪ

ತಾಲೂಕು : ಹೊಸಪೇಟೆ — ದಿಕ್ಕು : ಉತ್ತರ

ಜಿಲ್ಲೆ : ಬಳ್ಳಾರಿ — ಕಾಲ : ಕ್ರಿ.ಶ.೧೫೩೯

ಈ ಕೆರೆಯನ್ನ ಬಯಕಾರ ರಾಮಪ್ಪನು ತನ್ನ ತಂದೆಯಾದ ತಿಮ್ಮರಸಯ್ಯನಿಗೆ ಪುಣ್ಯವಾಗಲಿ ಎಂದು ಈ ಕೆರೆಯನ್ನು ಕಟ್ಟಿಸಿ ತಿಮ್ಮಸಮುದ್ರ ಎಂದು ಹೆಸರಿಟ್ಟನು ಎಂದು ಈ ಕೆರೆಯ ಏರಿಯಾ ಉತ್ತರ ತುದಿಯಲ್ಲಿರುವ ಶಾಸನ ತಿಳಿಸುತ್ತದೆ. ಈ ಕೆರೆಯು ಇಂದು ಉತ್ತಮವಾಗಿದೆ. ಕೆರೆಗೆ ಏರಿ, ತೂಬು, ಕೋಡಿ ಮತ್ತು ಕಾಲುವೆಗಳು ಇದ್ದು ವ್ಯವಸಾಯಕ್ಕೆ ಮುಖ್ಯವಾಗಿವೆ. ಏರಿಯು ಕಲ್ಲುಗೋಡೆಯಿಂದ ನಿರ್ಮಾಣ ಮಾಡಲಾಗಿದ್ದು ವ್ಯವಸ್ಥಿತವಾಗಿದೆ.

ಅಡವಿ, ಹಳ್ಳ-ಕೊಳ್ಳಗಳ ಮೂಲಕ ನೀರು ಸಂಗ್ರಹವಾಗುತ್ತದೆ. ತೂಬು ಇಂದು ದುಸ್ಥಿತಿಯಲ್ಲಿದೆ, ಈ ಕೆರೆಯ ಕಾಲುವೆಗಳನ್ನು ವ್ಯವಸಾಯಕ್ಕೆ ಉಪಯೋಗವಾಗವ ನಿಟ್ಟಿನಲ್ಲಿ ನಿರ್ಮಿಸಲಾಗಿದೆ. ಈ ಪ್ರದೇಶದಲ್ಲಿ ಶೇಂಗಾ, ಜೋಳ, ಮೆಕ್ಕೆಜೋಳ, ಹುರುಳಿ, ರಾಗಿ, ಭತ್ತ, ಗೋಧಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

## ೧೩. ಅಚ್ಚುತ ಸಮುದ್ರ

ಕೆರೆಯ ಸ್ಥಳ : ಚಿಕ್ಕಗಂಡಸಿ — ಕಟ್ಟಿಸಿದವರು : ಬಯಕಾರ ರಾಮಪ್ಪ

ತಾಲೂಕು : ಅರಸೀಕೆರೆ — ದಿಕ್ಕು : ಉತ್ತರ

ಜಿಲ್ಲೆ : ಹಾಸನ — ಕಾಲ : ಕ್ರಿ.ಶ. ೧೫೩೫

ಅರಸೀಕೆರೆ ತಾಲೂಕಿನ ಗಂಡಸಿ ಹೋಬಳಿಯಲ್ಲಿ ಬರುವ ಒಂದು ಗ್ರಾಮ ಚಿಕ್ಕಗಂಡಸಿ. ಕ್ರಿ.ಶ. ೧೫೩೫ನೆಯ ಅಚ್ಚುತರಾಯನ ಕಾಲದ ಶಾಸನದಲ್ಲಿ ರಾಮಪ್ಪನು ಚಿಕ್ಕಗಂಡಸಿಗೆ ಲಖಸಮುದ್ರವೆಂಬ ಪ್ರತಿನಾಮಧೇಯವನ್ನು ನೀಡಲಾಯಿತು. ಇಲ್ಲಿ ಬಯಕಾರ ರಾಮಪ್ಪನು ಅಗ್ರಹಾರವನ್ನು ಸ್ಥಾಪಿಸದನೆಂದು ವಿದ್ವಾಂಸರ ಅಭಿಪ್ರಾಯ. ಕೆರೆಯ ದಕ್ಷಿಣಭಾಗದ ಕೋಡಿಯ ಸಮೀಪ ಒಂದು ಚಿಕ್ಕಗುಡಿ ಇದೆ. ಅದನ್ನು ಸ್ಥಳೀಯರು ಹಿರಿಯರ ಗುಡಿಯೆಂದು ಕರೆದಿದ್ದಾರೆ.[೧೮]

ಕೆರೆಯು ೫೭.೪೫ ಹೇಕ್ಟೇರ್ ಜಲವಿಸ್ತೀರ್ಣ ಮತ್ತು ೨೭.೨೮ ಎಂ.ಸಿ.ಎಫ್.ಟಿ.ಯಷ್ಟು ನೀರಿನ ಸಂಗ್ರಹಣ ಸಾಮಥ್ಯ ಹೊಂದಿದ್ದು, ೪೮.೫೫ ಹೇಕ್ಟೇರ್ ಆಯಕಟ್ಟು ಪ್ರದೇಶಕ್ಕೆ ನೀರನ್ನು ಒದಗಿಸುವ ಸಾಮರ್ಥ್ಯ ಹೊಂದಿದೆ. ಏರಿಯು ದಕ್ಷಿಣದಿಂದ ಪಶ್ಚಿಮಾಭಿಮುಖವಾಗಿ ಅಂಕುಡೊಂಕಾಗಿ ಮುಂದುವರಿದಿದೆ. ಸುಮಾರು ೧೬೫೦ ಮೀ. ಉದ್ದ ಮತ್ತು ೩ ಮೀ. ಮೇಲ್ಭಾಗದ ಅಗಲ ಹೊಂದಿದೆ. ಏರಿಗೆ ಅಳವಡಿಸಿದಂತೆ ೨ ತೂಬುಗಳಿವೆ. ಹಳೆಯ ತೂಬುಗಳು ಏರಿಯಿಂದ ೮ ಅಡಿ ದೂರದಲ್ಲಿದ್ದು, ಪ್ರಸ್ತುತ ದಿನಗಳಲ್ಲಿ ಕಾರ್ಯನಿರ್ವಹಣೆಯಿಲ್ಲದೆ ಹಾಳಾಗಿವೆ. ಕೆರೆಯ ಹೆಚ್ಚುವರಿ ನೀರು ಹೊರಹೋಗಲು ದಕ್ಷಿಣದಿಕ್ಕಿಗೆ ಒಂದು ಕೋಡಿ ಇದೆ. ಕೆರೆಯ ಅಂಗಳದಲ್ಲಿ ಮಹಾಲಿಂಗೇಶ್ವರ ದೇವಾಲಯವಿದೆ.

ಈ ದೇವಾಲಯದ ಮುಂಭಾಗದಲ್ಲಿ ಸುಮಾರು ೧.೫ ಅಡಿ ಅಗಲ, ೧ ಅಡಿ ಉದ್ದದ ನೆಲಕ್ಕೆ ಹಾಸಿದ ಕಲ್ಲಿನ ಮೇಲೆ ಭೈರವಪಾದ ಶಿಲ್ಪ ಫಲಕಗಳಿವೆ. ಗ್ರಾಮದ ಸ್ಥಳೀಯರೊಬ್ಬರು ಈ ಶಿಲ್ಪಫಲಕವು ಮೊದಲು ಗ್ರಾಮದ ಭೈರವ ದೇವಾಲಯದ ಮುಂಭಾಗದಲ್ಲಿತ್ತು. ನಂತರ ದೇವಾಲಯವನ್ನು ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ ಮಹಾಲಿಂಗೇಶ್ವರ ದೇವಸ್ಥಾನದ ಹತ್ತಿರ ತಂದು ಹಾಕಿರುವಂತೆ ತಿಳಿಸಿದ್ದಾರೆ. ಈ ಫಲಕದ ಪಾದಗಳ ಸುತ್ತ ನಾಗಸರ್ಪ ಸುತ್ತಿದೆ. ಇದರ ಎರಡು ಬದಿಯಲ್ಲಿ ಬೋರಲಾಗಿ ಮಲಗಿದೆ ಭಂಗಿಯಲ್ಲಿರುವ ಎರಡು ಕತ್ತರಿಸಿದ ವ್ಯಕ್ತಿಗಳ ಮುಂಡ ಮತ್ತು ರುಂಡಗಳು ಇದ್ದು, ಎಡಭಾಗದ ವ್ಯಕ್ತಿ ಮುಂಡದ ಕೆಳಗೆ ಪ್ರಾಣಿ ಮುಂಡ ಮತ್ತು ರುಂಡ ಇದೆ.[೧೯]

ಆದರೆ ಈ ಶಿಲ್ಪಫಲಕದಲ್ಲಿ ಪ್ರತ್ಯೇಕಿಸಿದ ರುಂಡವು ಸ್ಪಷ್ಟವಾಗಿ ಗೋಚರಿಸಿಲ್ಲ. ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದೆ. ಆದರೆ ಗ್ರಾಮದ ಜನರು ಕೆರೆಯ ವಿಸ್ತೀರ್ಣದಲ್ಲಿ ತಿಪ್ಪೆಗೊಬ್ಬರವನ್ನು ಹಾಕಿ ಕೆರೆಯ ನೈರ್ಮಲ್ಯವನ್ನು ಹಾಳುಮಾಡುತ್ತಿದ್ದಾರೆ. ಊರಿನ ಗ್ರಾಮಸ್ಥರು ಇತ್ತಕಡೆ ಗಮನ ಹರಿಸಿದರೆ ಗ್ರಾಮದ ಮತ್ತು ಕೆರೆಯ ಸೌಂದರ್ಯವನ್ನು ಹೆಚ್ಚಿಸಬಹುದು. ಗ್ರಾಮದಲ್ಲಿ ಯಾವುದೇ ರೋಗಗಳು ಹರಡದಂತೆ ತಡೆಯಬಹುದು ಎಂಬುದು ನನ್ನ ಅನಿಸಿಕೆಯಾಗಿದೆ. ಚಿಕ್ಕಕೆರೆಯಾಗಿನಹಳ್ಳಿ ಮತ್ತು ತಿಮ್ಮಲಾಪುರದ ಶಾಸನಗಳು ಲಿಂಗಲಾಯತಟಾಕಂ, ವೆಂಕಟಯ್ಯತಟಾಕಂ ಎಂಬ ತಟಾಕಗಳನ್ನು ಉಲ್ಲೇಖಿಸುತ್ತವೆ. ಶಾಸನಗಳು ಕೆರೆಗಳನ್ನೇ ಬಹುಶಃ ಸಮುದ್ರಗಳೆಂದು ಜಲಾಶಯಗಳನ್ನು (ನೀರಿನ ಕೊಳ) ತಟಾಕಗಳೆಂದು ಕರೆದಿರುವ ಸಾಧ್ಯತೆಯಿದೆ. ಇವುಗಳು ನೋಡಲು ಬಹು ವಿಸ್ತಾರವಾಗಿದ್ದು, ಹೆಚ್ಚು ನೀರನ್ನು ಸಂಗ್ರಹ ಮಾಡಿಟ್ಟುಕೊಂಡ ಕಾರಣಕ್ಕಾಗಿ ಇವುಗಳನ್ನು ಶಾಸನಗಳು ಸಮುದ್ರಗಳೆಂದು ಆ ಕಾಲಕ್ಕೆ ಕರೆದಿರುವುದು ಸರಿ ಎನಿಸುತ್ತದೆ.[೨೦]

**ಅಡಿ ಟಿಪ್ಪಣಿಗಳು**

೧. ಬಳ್ಳಾರಿ ಜಿಲ್ಲಾ ಗೆಜಿಟಿಯರ್. ಪು.ಸಂ. ೮

೨. ಕೊಟ್ರಯ್ಯ ಸಿ.ಟಿ.ಎಂ, ೨೦೦೯, ವಿಜಯನಗರ ಕಾಲದ ತುಂಗಾಭದ್ರಾ ನದಿಯ ಅಣೆಕಟ್ಟುಗಳು, ಪು.ಸಂ.೩೩

೩. ಅದೇ....

೪. ಅದೇ....

೫. ಪದ್ಮ. ಬಿ.ಎಸ್. ಹಾಸನ ಜಿಲ್ಲೆಯ ಕೆರೆಗಳು, ಪು.ಸಂ.೭೧

೬. ಅದೇ...ಪು.ಸಂ.೭೭

೭. ಮುನಿರಾಜಪ್ಪ (ಸಂ), ೨೦೦೯, ಕರ್ನಾಟಕ ಕೆರೆ ನೀರಾವರಿ ಅಧ್ಯಯನ, ಪು.ಸಂ.೪೪

೮. ಅದೇ...

೯. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೬೩

೧೦. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೬೭

೧೧. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೪೫

೧೨. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೪೯

೧೩. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೫೦

೧೪. ಎಸ್.ಎನ್.ಶಿವುರುದ್ರಸ್ವಾಮಿ, ೨೦೦೫ ತಿಮ್ಮಲಾಪುರ ಅಗ್ರಹಾರ, ಪು.ಸಂ. ೭

೧೫. ಕರ್ನಾಟಕ ಶಾಸನ ಸಂಪುಟ. (ಬಳ್ಳಾರಿ ಜಿಲ್ಲೆ) ಪು.ಸಂ.೧೩೯

೧೬. ತಿಪ್ಪೇಸ್ವಾಮಿ.ಎಚ್, ೨೦೧೪, ಬಯಕಾರ ರಾಮಪ್ಪನ ಜನಪರ ಸೇವೆ, ೨೬

೧೭. ಅದೇ...೪೨

೧೮. ಪದ್ಮ, ಪೂರ್ವಕ್ತಿ, ಪು.ಸಂ ೭೧

೧೯. ಅದೇ...೭೨

೨೦. ತಿಪ್ಪೇಸ್ವಾಮಿ.ಎಚ್, ಪೂರ್ವಕ್ತ, ೭೬

# ಅಧ್ಯಾಯ ನಾಲ್ಕು

## ನಂಬಿಕೆ ಮತ್ತು ಆಚರಣೆಗಳು

ನಂಬಿಕೆ ಮತ್ತು ಆಚರಣೆಗಳು ಸಂಸ್ಕೃತಿಯ ಒಂದು ಭಾಗ. ಮನುಕುಲಕ್ಕೆ ಬೇಕಾದ ಸಂಸ್ಕೃತಿ ಬಹಳ ವ್ಯಾಪಕ ಅರ್ಥವನ್ನು ಒಳಗೊಂಡಿದೆ. ನ್ಯಾಯ, ನೀತಿ, ಧರ್ಮ ಪ್ರಮಾಣಿಕತೆ ಇವೆಲ್ಲವನ್ನು ಒಳಗೊಂಡಿರುವುದೇ ಸಂಸ್ಕೃತಿ. ಅದರಲ್ಲಿ ಸಂಗೀತ, ಸಾಹಿತ್ಯ, ಕಲೆ, ನಂಬಿಕೆ, ಸಂಪ್ರದಾಯ, ಜಾತ್ರೆ ಉತ್ಸವ ಮೊದಲಾದವುಗಳು ಸಮಾವೇಶಗೊಂಡಿರುತ್ತವೆ. ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಿಗಾಗಿ ಬೆಳೆದು, ಉಳಿದುಕೊಂಡು ಬಂದಿದೆ. ಜನಪದರ ನಿತ್ಯ ಬದುಕಿಗೂ, ನಂಬಿಕೆಗಳಿಗೂ ನಿಕಟವಾದ ನಂಟಿದೆ. ಅದನ್ನು ಪ್ರತ್ಯೇಕಿಸಲು ಅಸಾಧ್ಯವೆನ್ನುವಷ್ಟು ಗಾಢವಾಗಿ ಅವು ಒಂದನ್ನೊಂದು ತಬ್ಬಿನಿಂತಿವೆ. ಜನಪದರ ಆಂತರಿಕ ಮನೋಭಾವವನ್ನು ಹಾಗೂ ಅವರ ಮೂಲಸಂಸ್ಕೃತಿ ಮತ್ತು ಸಂಪ್ರದಾಯವನ್ನು ಪರಿಚಯಿಸುವ ಮುಖ್ಯ ಸಾಧನಗಳಲ್ಲಿ ನಂಬಿಕೆಗಳು ಪ್ರಮುಖ ಪಾತ್ರವಹಿಸುತ್ತವೆ.

ಇಷ್ಟೆಲ್ಲಾ ಪ್ರಾಮುಖ್ಯತೆಯನ್ನು ಪಡೆದಿರುವ ನಂಬಿಕೆಗಳ ಉಗಮ, ವಿಕಾಸ ಹಾಗೂ ಪ್ರಾಚೀನತೆಯತ್ತ ಗಮನ ಹರಿಸಬೇಕಾಗುತ್ತದೆ. ಪ್ರಾಚೀನತೆಯ ದೃಷ್ಟಿಯಿಂದ ಈ ಅಭಿಪ್ರಾಯ ಅತಿರೇಕದಂತೆ ತೋರಿ ಬಂದರೂ, ಉಗಮ ಮತ್ತು ವಿಕಾಸವನ್ನು ಗಮನಿಸದಾಗ ಅವೆರಡಕ್ಕೆ ಆಂತರಿಕ ಸಂಬಂಧವಿದೆ. ಮಾನವ ಒಂದಲ್ಲಾ ಒಂದು ಸ್ಥೀತಿಯಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿದಾಗಲೇ ನಂಬಿಕೆಗಳು ಉಗಮಗೊಂಡವು. ಅವನ ಮಾನಸಿಕ ಸ್ಥಿತಿ ಬದಲಾವಣೆಗೊಂಡಂತೆ ನಂಬಿಕೆಗಳು ವಿಕಾಸಗೊಂಡವು. ಬೇರೆ ಬೇರೆ ಸಂಸ್ಕೃತಿಗಳನ್ನು ಹೊಂದಿದಂತೆ ನಮ್ಮದೇ ಆದ ಜಲಸಂಸ್ಕೃತಿಯನ್ನು ಹೊಂದಿದ್ದೇವೆ. ಜಲವೆಂದರೆ ನೀರು. ನೀರು ಬರೀ ನೀರಲ್ಲ. ಅದಕ್ಕೆ ದೈವತ್ವದ ಸ್ವರೂಪವಿದೆ. ಪಂಚಭೂತಗಳಲ್ಲಿ ನೀರು ಒಂದಾಗಿದೆ. ಮಾನವ, ಪಶು, ಪಕ್ಷಿ, ಸಸ್ಯ, ಎಲ್ಲ ಜೀವಕೋಟಿಗೂ ನೀರು ಅತ್ಯವಶ್ಯಕ. ನೀರಿಲ್ಲದೆ ಬದುಕಿಲ್ಲ. ನೀರು ನಮ್ಮ ಜೀವಾಳ. ಅದು ಜೀವಜಲ. ಅಂತೆಯೆ ನೀರನ್ನು ಜಲದೇವತೆಯೆಂದು ಆರಾಧಿಸಲಾಗುತ್ತದೆ.

ಹೀಗೆ ನಮ್ಮ ದೈನಂದಿನ ಬದುಕಿನಲ್ಲಿ ಹಲವಾರು ರೀತಿಯ ನಂಬಿಕೆ ಮತ್ತು ಆಚರಣೆಗಳನ್ನು ರೂಡಿಸಿಕೊಂಡು ಬಂದಿದ್ದೇವೆ. ಇವು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿವೆ. ಅವರು ಪ್ರಕೃತಿ, ಪ್ರಾಣಿ, ಪಕ್ಷಿಗಳ ಮೇಲೆ ಹಲವು ನಂಬಿಕೆ ಮತ್ತು ಆಚರಣೆಗಳನ್ನು ಇಟ್ಟುಕೊಂಡಿದ್ದಾರೆ. ಅದರಂತೆ ಕೆರೆಗಳ ಬಗ್ಗೆಯೂ ಕೂಡ ಇವೆ. ಪ್ರಾಚೀನ

ಮತ್ತು ಮಧ್ಯಕಾಲೀನ ಯುಗದಲ್ಲಿ ನೀರಾವರಿ ಕಾರ್ಯಗಳ ನಿರ್ಮಾಣದಲ್ಲಿ ಕೃಷಿ ಆರ್ಥಿಕಾಭಿವೃದ್ಧಿಗೆ ಪೂರಕವಾದರೂ ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ ಕಾಲುವೆಗಳನ್ನು ನಿರ್ಮಿಸುವುದು, ಒಡ್ಡುಗಳನ್ನು ಹಾಕುವುದು ಧಾರ್ಮಿಕ ಕಾರ್ಯ. ಇಂತಹ ಕಾರ್ಯಗಳನ್ನು ಕೈಗೊಂಡ ವ್ಯಕ್ತಿ ಪುಣ್ಯಕ್ಕೆ ಅರ್ಹರಾಗುತ್ತಾರೆ ಎಂಬ ನಂಬಿಕೆ ಅಂದಿನಿಂದಲೂ ಜನರಲ್ಲಿ ಬೆಳೆದು ಬಂದಿದೆ. ಆದುದರಿಂದ ಜನರು ಈ ಕೆಲಸದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದರು. ಈ ಕಾರಣಗಳಿಂದಾಗಿ ಧರ್ಮದ ಜಾಡಿನಡಿಯಲ್ಲಿ ಜನರು ನಡೆಯುತ್ತಿದ್ದು, ಅವರಿಗೆ ಅರಿವಿಲ್ಲದೆಯೇ ಕೆಲವು ಆಚರಣೆಗಳು ಅವರ ದೈನಂದಿನ ಜೀವನದಲ್ಲಿ ಸೇರಿಕೊಂಡಿವೆ. ಅಂದಿನ ಸಮಾಜಿಕ ಮತ್ತು ಧಾರ್ಮಿಕ ಜೀವನವನ್ನು ಗಮನಿಸಿದಾಗ ನಮಗೆ ಇವು ತಿಳಿದು ಬರುತ್ತವೆ. ಕೆರೆಯಂ ಕಟ್ಟಿಸು ಬಾವಿಯಂ ಸವಡಸು ದೇವಗಾರಮಮ ಮಾಡಿಸು ಇದು ೧೪೧೧ರ ಹಂಪಿಯ ಶಾಸನವೊಂದರ[೧] ಮೊದಲ ಸಾಲು. ಆಗಿನ ಕಾಲದ ದೊರೆ ಪಾಲಿಸಬೇಕಾದ ಆಚರಣೆಗಳಲ್ಲಿ ಕೆರೆ, ಬಾವಿಗಳಿಗೆ ಮೊದಲ ಆಧ್ಯಯತೆಯನ್ನು ನೀಡಲಾಗಿದೆ.

ಕೆರೆ ಕಟ್ಟಿಸಿ ಜನರಿಗೆ ಅನುಕೂಲ ಮಾಡಿಕೊಡುವುದು ಪುಣ್ಯಕಾರ್ಯವಾಗಿದ್ದು, ಅದನ್ನು ದಾನವಾಗಿ ಕಟ್ಟಿಸಿಕೊಡಲಾಗುತ್ತಿತ್ತು. ಕೆರೆ ಗ್ರಾಮೀಣ ಜನಪದರ ಜೀವಾಳ ಹಾಗೂ ಹಳ್ಳಿಯ ಸ್ವತ್ತು ಕೂಡ ಹೌದು. ಕೆರೆ ತುಂಬಿದರೆ ಹಳ್ಳಿಗರಿಗೆ ಸಂಭ್ರಮ. ಆ ವರ್ಷ ಸುಗ್ಗಿ ಸಮೃದ್ಧಿಯಾಗುತ್ತದೆ. ಎಂಬ ಸಂತಸ. ಕೆರೆ ತುಂಬಿದೆ ನಮಗೆ ಬರ ಇಲ್ಲ. ಕೆರೆ ತುಂಬಿಲ್ಲ ಅಂದ್ರೆ ನಮಗೆ ಬರಬಂದಂತೆ ಎಂಬುದು ಜನಪದರ ಅನುಭವದ ಮಾತು. ಕೆರೆಗಳಿಗೆ ಸಂಬಂಧಿಸಿದಂತೆ ಪುರಾತನ ಸಾಂಖ್ಯಾಯನ ಗೃಹ್ಯಸೂತ್ರದಲ್ಲಿ ಬಾವಿ ಅಥವಾ ಕೆರೆಗಳನ್ನು ದೇವರಿಗೆ ಅರ್ಪಿಸಿದಂತೆ ಉಲ್ಲೇಖವಿದೆ. ಅಂದರೆ ಬಾವಿಯನ್ನು ಕೊಳವನ್ನು ಬಳಸುವ ಮುನ್ನ ವೈದಿಕ ಆಚರಣೆಗಳನ್ನು ನಡೆಸಿ ಋಗ್ವೇದದ ಮಂತ್ರಗಳನ್ನು ಉಚ್ಚರಿಸಿ ಮಳೆಯ ಅದಿದೇವತೆಯಾದ ವರುಣನನ್ನು ಮತ್ತು ಇತರೆ ದೇವತೆಗಳನ್ನು ಸುತ್ತಿಸಿದ ನಂತರದಲ್ಲಿಯೇ ಕೊಳ ಮತ್ತು ಬಾವಿಗಳನ್ನು ಉಪಯೋಗಿಸಬೇಕು ಎಂಬುದಾಗಿ ಈ ಗ್ರಂಥವು ತಿಳಿಸುತ್ತದೆ.

ಮಹಾಭಾರತದ ಪ್ರಕಾರ ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವರೋ ಅವರು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾರೆ ಎಂಬ ನಂಬಿಕೆ ಇದೆ. ಅದೇ ರಿತಿ ಅಗ್ನಿಪುರಾಣದ ೬೪ನೆಯ ಅಧ್ಯಾಯದಲ್ಲಿ ವರುಣ ದೇವನನ್ನು ಜಲದೇವನೆಂದೇ ವರ್ಣಿಸಲಾಗಿದೆ. ಅದರಂತೆ ಜಲಕ್ಕೆ ಸಂಬಂಧಿಸಿದ ಆಚರಣೆಗಳ ಬಗ್ಗೆ ಮಾಹಿತಿಗಳನ್ನು ನೀಡುತ್ತದೆ.

ಅವುಗಳಲ್ಲಿ ಕೆರೆ, ಬಾವಿ ಮುಂತಾದ ಜಲಕ್ಕೆ ಸಂಬಂಧಿಸಿದ ರಚನೆಗಳನ್ನು ಕೈಗೊಂಡಾಗ ಅಂತಹ ಸ್ಥಳದಲ್ಲಿ ಎಂಟು ಮಡಿಕೆಗಳಲ್ಲಿ ಎಂಟು ಬಗೆಯ ನೀರನ್ನು ತುಂಬಿಸಿ ಎಂಟು ದಿಕ್ಕುಗಳಲ್ಲಿ ಇಡಲಾಗುತ್ತದೆ. ಪೂರ್ವದಿಕ್ಕಿನ ಮಡಿಕೆಯಲ್ಲಿ ಸಮುದ್ರದ ನೀರನ್ನು ತುಂಬಿಸಿ ಎಂಟು ದಿಕ್ಕುಗಳಲ್ಲಿ ಇಡಲಾಗುತ್ತದೆ. ಪೂರ್ವದಿಕ್ಕಿನ ಮಡಿಕೆಯಲ್ಲಿ ಸಮುದ್ರದ ನೀರನ್ನು, ಅಗ್ನೇಯದಲ್ಲಿ ಗಂಗೆಯ ನೀರನ್ನು, ದಕ್ಷಣದಲ್ಲಿ ನದಿಯ ನೀರನ್ನು, ನೈಋತ್ಯದಲ್ಲಿ ಹಳ್ಳದ ನೀರನ್ನು, ಅಗ್ನೇಯದಲ್ಲಿ ಗಂಗೆಯ ನೀರನ್ನು, ದಕ್ಷಿಣದಲ್ಲಿ ನದಿಯ ನೀರನ್ನು, ನೈಋತ್ಯದಲ್ಲಿ ಹಳ್ಳದ ನೀರನ್ನು, ಪಶ್ಚಿಮದಲ್ಲಿ  ನದಿ ನೀರನ್ನು, ವಾಯುವ್ಯ ದಿಕ್ಕಿನಲ್ಲಿ ಪುರುಷ ನದಿಯ ನೀರನ್ನು, ಉತ್ತರದಲ್ಲಿ ಬಳ್ಳಿಗಳ ರಸ ಇಟ್ಟು, ಅಷ್ಟದಿಕ್ಪಾಲಕರನ್ನು ಪೂಜಿಸಿ, ಅದರಲ್ಲಿ ಒಬ್ಬರಾದ ವರುಣ ದೇವರ ಪ್ರತಿಮೆಯನ್ನು ಊರಿನಲ್ಲಿ ಮೆರವಣಿಗೆ ಮಾಡಿ ನಂತರ ಬಾವಿಯಲ್ಲಿ ಅಥವಾ ಕೆರೆಯಲ್ಲಿ ಮುಳುಗಿಸಬೇಕು. ಈ ರೀತಿ ಮಾಡಿದವರಿಗೆ ಅಶ್ವಮೇಧಯಾಗದ ಫಲಕ್ಕಿಂತಲೂ ಅಧಿಕ ಫಲ ದೊರೆಯುತ್ತದೆ ಎಂದು ತಿಳಿಸಿದೆ. ಹಾಗೇಯೇ ಕೆರೆ ಮತ್ತು ಬಾವಿಗಳು ಶುದ್ಧವಾಗುತ್ತವೆ ಎಂದಿದೆ.[೨]

ಕೆರೆಗಳನ್ನು ಕಟ್ಟಲು ಅದನ್ನು ಬಳಸಿಕೊಳ್ಳಲು ಸಹ ಒಳ್ಳೆಯ ದಿನ ಮುಹೂರ್ತಗಳನ್ನು ನೋಡುತ್ತಿದ್ದರು. ಈ ವಿಷಯಕ್ಕೆ ಸಂಬಂಧಿಸಿದ ಎರಡು ಶಾಸನಗಳನ್ನು ಉದಾಹರಿಸಬಹುದಾಗಿದೆ. ಮೊದಲನೆ ಬುಕ್ಕರಾಯನ ಆಳ್ವಿಕೆ ಕಾಲದಲ್ಲಿನ (ಕ್ರಿ.ಶ.೧೩೬೯) ಕಡಪ ಜಿಲ್ಲೆಯ ಪೊರುಮಾಮಿಲ್ಲಾ ಕೆರೆಯನ್ನು ರಾಜಕುಮಾರ ಭಾಸ್ಕರ ಭವದೂರ ನಿರ್ಮಿಸಿದನು. ಈ ಶಾಸನದಲ್ಲಿ ಕೆರೆಯನ್ನು ಕಟ್ಟಿದ ಶುಭಮುಹೂರ್ತವನ್ನು ತಿಳಿಸಿದೆ. ಆ ದಿನದ ವಿವರಣೆಯೂ ಈ ರೀತಿಯಾಗಿದೆ. ಶಕವರ್ಷ ೧೨೯೧ರ ಸೌಮ್ಯ ಸಂವತ್ಸರ ಕಾರ್ತಿಕ ಶುದ್ಧ ೧೪ನೆಯ ದಿನ ಗುವಾರ ಪುಷ್ಯ ಕರ್ಕಾಟಕ ಲಗ್ನದ ದಿನದಂದು ಎಲ್ಲಾ ಗ್ರಹಗಳು ಅನುಕೂಲವಾಗಿರುವವೆಂದು ಈ ಕೆರೆಯನ್ನು ಕಟ್ಟಲಾಯಿತೆಂದೂ ಶಾಸನವು ಉಲ್ಲೇಖಿಸಿದೆ.

ಎರಡನೇ ಶಾಸನವು ತುಮಕೂರು ಜಿಲ್ಲೆಯಲ್ಲಿ ಎರಡನೆಯ ಹರಿಹರನ ಕಾಲಕ್ಕೆ ಸಂಬಂಧಿಸಿದ್ದು, ಇದರಲ್ಲಿ ಕುಣಿಗಲ್ಲು ಕೆರೆಯ ತೂಬುನ್ನು ಕ್ರಿ.ಶ. ೧೩೬೯ರಲ್ಲಿ ಮಂತ್ರಿವರ್ಯನಾದ ಇರುಗಪ್ಪ ಡಣ್ಣನಾಯಕನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ.  ಈ ತೂಬಿನ ಕಲ್ಲನ್ನು ಪ್ರಶಸ್ತವಾದ ಶುಭಲಗ್ನದಲ್ಲಿ ಸ್ಥಾಪಿಸಲಾಯಿತು ಎಂದು ತಿಳಿಸುತ್ತಾ ಅದರ ವಿವರಗಳನ್ನು ಈ ರೀತಿಯಾಗಿ ನೀಡುತ್ತದೆ. ಶಕ ವರ್ಷ ೧೩೧೬ರ ಭಾವನಾಮ ಸಂವತ್ಸರದ ಭಾದ್ರಪದ ಶುಕ್ಲಪಕ್ಷದ ಮೊದಲ ದಿನದಂದು ಸೂರ್ಯೋದಯ ಏಳು ಘಟಕ ಸಂದ ನಂತರ ಧನುರ್ ಲಗ್ನದಲ್ಲಿ ತೂಬನ್ನು

ಸ್ಥಾಪಿಸಲಾಯಿತು ಎಂದು ದಾಖಲಿಸಿದೆ. ಇಂತಹ ಯಾವುದೇ ಕಾರ್ಯದ ಆರಂಭದಲ್ಲಿ ಭೂಮಿಪೂಜೆ ಮಾಡುವಾಗ, ಬುನಾದಿ ಕಲ್ಲನ್ನು ಹಾಕುವಾಗ ಮೊದಲ ಬಾರಿ ನೀರು ದೊರೆತಾಗ, ತೂಬುಗಳನ್ನು ನಿರ್ಮಿಸುವಾಗ, ಶಾಸನಗಳನ್ನು ನೆಡುವಾಗ ಈ ಮಾದರಿಯ ಪೂಜೆಗಳನ್ನು ಮಾಡುತ್ತಿದ್ದರು. ಬಯಕಾರ ರಾಮಪ್ಪನ ಕೆರೆಗಳ ಕುರಿತಂತೆ ಕೆಲವು ನಂಬಿಕೆ ಆಚರಣೆಗಳು ಇದ್ದವು ಅವುಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಗಂಗಾಸ್ನಾನ**

ಜನಪದರ ಸ್ಮೃತಿಯಲ್ಲಿ ಗಂಗೆ ಕೇವಲ ನೀರನ್ನು ಸಂಕೇತಿಸುವ ಜಲದೇವತೆಯಲ್ಲ. ಈಕೆ ಇಡೀ ನಿಸರ್ಗದ ಪ್ರತೀಕ. ಮೇಲಾಗಿ ನೀರು ಸ್ತ್ರೀರೂಪಿ. ಕೃಷಿಗೆ ಸಂಬಂಧಿಸಿದ ಅಸಂಖ್ಯಾತ ಜಾನಪದ ದೇವತೆಗಳಲ್ಲಿ ಹೆಚ್ಚಿನವರು ಹೆಣ್ಣುಗಳೇ. ಈ ಎಲ್ಲಾ ದೇವರುಗಳ ಅದಿದೇವತೆ ಗಂಗೆ. ಗ್ರಾಮಾಂತರ ಪ್ರದೇಶದಲ್ಲಿ ಕಂಡುಬರುವ ನೂರಾರು ಮಾರಿ, ಮುದ್ದು, ಚೌಡಿ, ದುಗಿ ಮುಂತಾದ ದೇವತೆಗಳ ಪೂಜೆಗಳು ಆರಂಭಗೊಳ್ಳುವುದೇ ಗಂಗೆಪೂಜೆಯಿಂದ.[೩] ಗ್ರಾಮದೇವರುಗಳು ಕೆಲವು ಕೆರೆಗಳಿಗೆ ಗಂಗಾಸ್ನಾನಕ್ಕೆ ಆಗಮಿಸುತ್ತವೆ. ಈ ಆಚರಣೆಯಲ್ಲಿ ಗ್ರಾಮದೇವರುಗಳನ್ನು ಸಮೀಪದ ಜಲವೊಂದರ ಬಳಿ ಕರೆದೊಯ್ದು ಪೂಜೆ ಸಲ್ಲಿಸುವರು. ಇದನ್ನು ದೇವರನ್ನು 'ಜಲಧಿಗೆ' ಹೊರಡಿಸುವುದು ಎಂಬ ಹೆಸರಿನಿಂದ ಗುರುತಿಸುತ್ತಾರೆ. ವೈದಿಕ ದೇವರುಗಳಾದ ಕೃಷ್ಣ, ಶಿವ, ರಾಮ ಮುಂತಾದ ದೇವರುಗಳ ಪೂಜಾವಿಧಿಗಳೂ ಕೂಡ ಗಂಗಾಸ್ನಾನದಿಂದಲೇ ಆರಂಭಗೊಳ್ಳುತ್ತದೆ.

ಇಂತಹ ಕೆರೆಗಳಿಗೆ ಗ್ರಾಮದ ದೇವರುಗಳಿಗೆ ಗ್ರಾಮದ ಅರ್ಚಕವೃಂದ ಮತ್ತು ದೇವರುಗಳ ಆರಾಧಕರು ಭಕ್ತಿಭಾವದಿಂದ ಕರೆತಂದು ಅವುಗಳಿಗೆ ಅಮೃತಸ್ನಾನ ಮಾಡಿಸುತ್ತಾರೆ. ಅವುಗಳ ಪೂಜಾಸಾಮಗ್ರಿಗಳನ್ನು ಮತ್ತು ಅಲಂಕರಣ ಸಾಮಗ್ರಿಗಳನ್ನು ತೊಳೆಯುತ್ತಾರೆ. ಆನಂತರ ದೇವರುಗಳಿಗೆ ಪುಣ್ಯಾಹವನ್ನು ಮಾಡಿಸಿ, ಗೋವಿನ ಗಂಜಲದಿಂದ ಶುದ್ಧೀಕರಿಸುತ್ತಾರೆ. ಈ ರೀತಿ ಕಾರ್ಯ ಮಾಡಿದ ಮೇಲೆ ಕುಂಭದ ಅಭಿಷೇಕ ಮಾಡಿ ಅಲಂಕಾರ ಮಾಡುತ್ತಾರೆ. ಅಭಿಷೇಕದ ಕೊನೆಯಲ್ಲಿ ಅಷ್ಟಗಂಧ ಬಳಸುತ್ತಾರೆ. ಹೀಗೆ ಅವಭೃತ ಸ್ನಾನ ಮಾಡಿಸಿದ ದೇವರಿಗೆ, ಷೋಡಶೋಪಚಾರ ಪೂಜೆ ನಂತರ ಗಣಪತಿ ಹೋಮ, ನವಗ್ರಹ ಹೋಮ ಹಾಗೂ ಪ್ರತಿಗ್ರಾಮ ದೇವತೆ ಹೆಸರಿನಲ್ಲಿ ಹೋಮ ಮಾಡಲಾಗುತ್ತದೆ.

ಶ್ರೀ ದೇವತೆಗಳಿಗೆ ಶಕ್ತಿದೇವತೆಯ ಮೂಲಕ, ವಿಷ್ಣುಸಂಬಂಧಿ ದೇವತೆಗಳಿಗೆ ವಿಷ್ಣುಸಂಬಂಧಿ ಸ್ತುತಿಗಳಿಂದ ಹೋಮ ಮಾಡಿ ಕಳಾಕರ್ಷಣೆ ಮಾಡಿ ರಕ್ಷೆಯನ್ನು ಕೊಡಲಾಗುತ್ತದೆ. ದೇವರಿಗೆ ಅಭಿಷೇಕ, ಪೂಜೆ, ಹೋಮಗಳಾದ ಮೇಲೆ ನೈವೇದ್ಯ ರೂಪದಲ್ಲಿ ಕಡಲೇಕಾಳು, ಬಾಳೆಹಣ್ಣಿನ ರಸಾಯನ, ಸೌತೆಕಾಯಿ ತಂಬಿಟ್ಟನ್ನು ಸಮರ್ಪಿಸುತ್ತಾರೆ. ತರುವಾಯ ದೇವರುಗಳು ಸ್ವಗ್ರಾಮಕ್ಕೆ ತೆರಳುತ್ತವೆ. ಪ್ರಸ್ತುತ ಕ್ಷೇತ್ರಕಾರ್ಯ ಕೈಗೊಂಡಾಗ ಹುಲಿಕುಂಟೆ, ತಿಮ್ಮಲಾಪುರ, ಪೋತಲಕಟ್ಟೆ, ಮಗಿಮಾವಿನಹಳ್ಳಿ ಕೆರೆಗಳಲ್ಲಿ ಈ ವಿಧಾನಗಳನ್ನ ಕಾಣುತ್ತವೆ.

**ಗಂಗಮ್ಮನ ಪೂಜೆ**

ಗಂಗಮ್ಮ ಪೂಜೆ ಮಾಡುವುದು ಕೆಲವು ಕಡೆ ಆಚರಣೆಯಲ್ಲಿ ಇರುವಂತಹ ಒಂದು ಸಂಪ್ರದಾಯ. ಗಂಗೆಯೆಂದರೆ ಕೇವಲ ಜೀವದಾಯಕ ನೀರಲ್ಲ. ಮನಸ್ಸಿನ ಕಳಂಕವನ್ನು ತೊಡೆದುಹಾಕುವ ಪಾಪನಾಶಿನಿಯೆಂದು ಭಾವಿಸುತ್ತಾರೆ. ಯಾವುದೇ ಧಾರ್ಮಿಕ ಕಾರ್ಯ ಅಥವಾ ಪೂಜೆ ಮಾಡುವಾಗ ನೀರಿನಿಂದ ಶುದ್ಧೀಕರಣ ಮಾಡುವ ಪುಣ್ಯಾಹವಾಚನವೆಂಬ ಕ್ರಿಯೆಯನ್ನು ಮಾಡುವುದು ಹಿಂದಿನಿಂದ ಬಂದ ಪದ್ಧತಿ. ವ್ರತಗಳನ್ನು ಪ್ರಾರಂಭಿಸುವ ಸಂದರ್ಭದಲ್ಲಿ ಗಂಗಾಪೂಜೆ ಮಾಡುತ್ತಾರೆ.[೪] ವೈಶಾಖಮಾಸದ ಶುದ್ಧಸಪ್ತಮಿ ದಿನವನ್ನು ಗಂಗಾಸಪ್ತಮಿ ಎಂದು ಕರೆಯಲಾಗಿದ್ದು, ಅದನ್ನು ಒಂದು ವ್ರತದ ರೂಪದಲ್ಲಿ ಆಚರಿಸುತ್ತಾರೆ. ತುಲಾ ಸಂಕ್ರಮಣದ ದಿನ ತಲಕಾವೇರಿ ಉಕ್ಕಿಬರುವ ಅದ್ಭುತ ಸನ್ನಿವೇಶ, ಅಂದು ಕೊಡಗಿನ ಜನರಿಗೆ ಹಬ್ಬ. ಆ ದಿನ ಅಲ್ಲಿಂದ ನೀರು ತಂದು ಮುಂದಿನ ವರ್ಷಗಳವರೆಗೂ ಇಟ್ಟು ಪೂಜೆ ಮಾಡುತ್ತಾರೆ.

ರಾಮಾಯಣ ಮಹಾಕಾವ್ಯದಲ್ಲಿ ಋಷಿಯ ಕೋಪಕ್ಕೆ ತುತ್ತಾದ ಭಗೀರಥ ತನ್ನ ಪೂರ್ವಜರಿಗೆ ಮುಕ್ತಿ ದೊರಕಿಸಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ಗಂಗೆಯನ್ನು ಅವರ ಭಸ್ಮದ ಮೇಲೆ ಹರಿಸಲು ಆಕೆಯನ್ನು ಭೂಲೋಕಕ್ಕೆ ತರಿಸಿದನೆಂದು ಉಲ್ಲೇಖವಿದೆ. ಗಂಗೆಯ ರಭಸವನ್ನು ತಡೆಯಲು ಶಿವ ಆಕೆಯನ್ನು ತನ್ನ ಜಟೆಯಲ್ಲಿ ಹಿಡಿದಿರಿಸಿದ. ಗಂಗೆ ಶಿವನ ಜಟೆಯಿಂದ ಸಪ್ತ ನದಿಗಳಾಗಿ ಹರಿದಳೆಂಬುದು ಪೌರಾಣಿಕ ಪ್ರತೀತಿ. ಮಹಾಭಾರತದಲ್ಲಿ ಗಂಗೆ ಹಿಮವತ್ ರಾಜನ ಮಗಳು. ಶಂತನು ಮಹಾರಾಜನ ಪತ್ನಿಯಾಗಿ ಭೀಷ್ಮನನ್ನು ಮಗನಾಗಿ ಪಡೆದಳು. ಆದ್ದರಿಂದ ಭೀಷ್ಮನಿಗೆ ಗಾಂಗೇಯ ಎಂಬ ಹೆಸರು ಬಂದಿತು. ಗಂಗಾನದಿಯ ಉಗಮಸ್ಥಾನದಿಂದ ಗಂಗೋತ್ರಿಯಲ್ಲಿ ಇಂದಿಗೂ ಗಂಗೆಯನ್ನು ಸಣ್ಣ ಕಲಶದಲ್ಲಿ ತುಂಬಿ ಮೊಹರು ಮಾಡಿ ಮಾರಾಟ ಮಾಡುತ್ತಾರೆ. ಗಂಗೆಗಿಂತ ಪವಿತ್ರವಾದದು ಯಾವುದೂ ಇಲ್ಲ

ಎಂಬ ನಂಬಿಕೆ ಜನಪದರಲ್ಲಿದೆ. ಗಂಗೆ ಸೃಷ್ಟಿಯ ಮೂಲ. ಫಲವಂತಿಕೆಯ ಪ್ರತಿರೂಪ. ಯಾವುದೇ ದೇವರನ್ನು ಪೂಜಿಸಬೇಕದರೂ ಕೊಡದಲ್ಲಿ ನೀರನ್ನು ತುಂಬಿಟ್ಟು, ಅದಕ್ಕೆ ಹರಕೆ ಸಲ್ಲಿಸಬೇಕಾದ ದೇವರ ಹೆಸರಿನಲ್ಲಿ ಪೂಜಿಸಿದರೆ ಅದು ಆ ದೇವರಿಗೆ ಸಲ್ಲುತ್ತದೆ ಎಂಬ ನಂಬಿಕೆ ಇದೆ. ಹಾಗಾಗಿ ಗ್ರಾಮಾಂತರ ಪ್ರದೇಶದಲ್ಲಿ ಗಂಗೆಪೂಜೆ ಅತ್ಯಂತ ಮಹತ್ವ ಪಡೆದಿದೆ. ಸಾಮಾನ್ಯವಾಗಿ ಕೆರೆ ತುಂಬಿದಾಗ ಗಂಗೆಪೂಜೆ ಮಾಡಿ ತೂಬನ್ನು ಎತ್ತುತ್ತಾರೆ. ವಿವಾಹದ ಸಂದರ್ಭದಲ್ಲಿ ಮೂರು ಜನ ಮುತ್ತೈದೆಯರು ಮೂರು ಕೊಡದಲ್ಲಿ ನೀರನ್ನು ತುಂಬಿಟ್ಟು ಪೂಜೆ ಮಾಡಿ ತರುವ ಪದ್ಧತಿ ಇದೆ. ಈ ತರಹದ ಆಚರಣೆಯು ಚಿಕ್ಕ ಕೆರೆಯಾಗಿನಹಳ್ಳಿ ಕೆರೆಯಲ್ಲಿ ಕಾಣುತ್ತವೆ.

**ಮಳೆಗೆ ಸಂಬಂಧಿಸಿದ ನಂಬಿಕೆಗಳು**

ನೀರು ಜನಜೀವನದ ಅವಿಭಾಜ್ಯ ಅಂಗ. ಮಾನವನ ನೆಲೆ ನದಿ ದಂಡೆ, ಸರೋವರಗಳ ಹತ್ತಿರವೆ ಬೆಳೆದುಬಂದಿದೆ. ಇದಕ್ಕೆ ಮುಖ್ಯ ಕಾರಣ ಜನ ಮತ್ತು ಜಾನುವಾರುಗಳಿಗೆ ಲಭ್ಯವಾಗುವ ನೀರು. ನಾಗರಿಕತೆ ಬೆಳೆದಂತೆ ನೀರನ್ನು ಬೇಕಾದೆಡೆಗೆ ಒಯ್ದು ಜೀವನ ನಡೆಸುವ ವಿಧಾನ ರೂಢಿಗೆ ಬಂದಿತು. ಅದೇ ರೀತಿ ನದಿಗಳಿಗೆ ಅಡ್ಡಲಾಗಿ ಜಲಾಶಯಗಳನ್ನು ನಿರ್ಮಿಸಿ ನೀರನ್ನು ಕಾಲುವೆಯ ಮುಖಾಂತರ ಹರಿಸಿ ಕೃಷಿ ಕಾರ್ಯಗಳಿಗೆ ಬಳಸಿಕೊಳ್ಳಲಾಯಿತು. ಮಳೆಗಾಲದಲ್ಲಿ ಹೇರಳವಾಗಿ ದೊರೆಯುತ್ತಿದ್ದ ನೀರನ್ನು ಸಂಗ್ರಹಿಸಲು ಕೆರೆ ಕಟ್ಟೆಗಳನ್ನು ನಿರ್ಮಾಣ ಮಾಡುವ ಪದ್ಧತಿ ಬೆಳೆಯಿತು. ಈ ಎಲ್ಲ ಜಲ ಸಂಗ್ರಹಗಳು ಮತ್ತು ಬಳಕೆ ವಿಧಾನಗಳಿಗೂ ಮಳೆಯೇ ಮೂಲಧಾರ. ಆದ್ದರಿಂದ ಜನಪದರು ಮಳೆ ಆಗು-ಹೊಗುಗಳಿಗೆ ಇಂದ್ರ, ವರುಣ ಮತ್ತು ಪರ್ಜನ್ಯ ಮೊದಲಾದ ದೇವತೆಗಳನ್ನು ಆರಾಧಿಸುತ್ತಾರೆ.

ಕೆರೆ ಕಟ್ಟೆ ಕಾಲುವೆ ಹರಿಯಲಿ
ಬಾವೀಲಿ ಸಿಹಿನೀರು ಉಕ್ಕಲಿ
ದೇವ ನಿನ್ನ ಹಬ್ಬ ಹೆಚ್ಚಲಿ
ಹೋದ ಜೀವವು ಕೂಡಿಕೊಂಡೇಳಲಿ
ಸ್ವಾತಿಯ ಮಳೆ ಹುಯ್ದು ಸೀತೆಯ ಕೆರೆತುಂಬಿ
ಜೋತಾಡುತ್ತೈತೆ ಕುಣಿಗಲು ಕುಚ್ಚಿನ ಮೀನು
ಮುಂಗೈಯ ನೋಡಿ ನಗತೈತೆ !

ಹೀಗೆ ಸಮಾಜದಲ್ಲಿನ ಜನಸಾಮಾನ್ಯರ ನಂಬಿಕೆ. ಆಚಾರ ವಿಚಾರಗಳನ್ನು ನೋಡಿದ ಸರ್ವಜ್ಞ ಕವಿ ಮಳೆಯ ಆಗು ಹೋಗುಗಳನ್ನು ತನ್ನದೇ ಆದ ರೀತಿಯಲ್ಲಿ ಚಿತ್ರಿಸಿದ್ದಾನೆ.[೫] ಮಳೆ ನೀರಿನ ಪ್ರಾಕೃತಿಕ ರೂಪ. ಇದಕ್ಕೆ ಜನಪದ ಬದುಕಿನಲ್ಲಿ ಪ್ರತ್ಯೇಕವಾದ ಸ್ಥಾನವಿದೆ. ಮೋಡ ಕರಗಿ ನೆಲ ಸೇರುವ ಮುನ್ನ ಸುರಿಯುವ ನೀರನ್ನು ಮಳೆ ಎಂದು ಕರೆಯುತ್ತಾರೆ. ನೆಲ ಸೇರಿದ ನಂತರ ಬೇರೆಯದೇ ರೂಪವನ್ನು ಪಡೆಯುತ್ತದೆ. ಮಳೆ ಸಮೃದ್ಧಿಯ, ಫಲವಂತಿಕೆಯ ಸಂಕೇತ. ಮಳೆಯಿಲ್ಲದೆ ಮನುಷ್ಯ ಪಟ್ಟಿಯಲ್ಲಿರುವ ಪಾಡುಗಳನ್ನು ಜನಪದರ ಹಾಡು ಮತ್ತು ಆಚರಣೆಗಳಲ್ಲಿ ಕಾಣಬಹುದು. ಮುಖ್ಯವಾಗಿ ಬೇಸಾಯದ ಉಳಿವು ನಿಂತಿರುವುದೇ ಮಳೆಯಾಧಾರದ ಮೇಲೆ. ಸಕಾಲದಲ್ಲಿ ಮಳೆಯಾಗದೇ ಹೋದರೆ ಆಗುವ ಅನಾಹುತವನ್ನು ಹಾಡುಗಳು ವರ್ಣಿಸುತ್ತವೆ.

ಮೋಡಾದ ಕಡೆಯಿಂದ, ಮಿಂಚಿನ ಸುಳಿಯಿಂದ
ಧಳ ಧಳ ಹೊಳೆಯುತ್ತ, ಬರುತ್ತಾಳೆ
ಗುಡುಗು ಗೂಡಾಗಿ ಸಿಡಿದಳೋ ಜಲ ಜಲ
ಗಂಗಮ್ಮ ತಾಯಿ ಬರುತ್ತಾಳೆ, ಧರೆಗೆ
ಅಂಬರದಲ್ಲಿ ಯಾಕೆ ನಿಂತೋ ಮಳೆರಾಯ..
ಅಪ್ಪ ನೀನಿಲ್ಲದೆ ಸೊಪ್ಪಾದೋ ಈ ಭೂಮಿ
ಸಪ್ಪೆ ದಂಟಾದೋ ದನಕರ ದೇವೇಂದ್ರರಾಯ
ಕಂಚಿನ ಹಣವಾಗಿ ಸುರಿಬಾರೊ

ಈ ಹಾಡುಗಳು ಮಳೆಗಾಗಿ ಅರ್ಚಿಸುವ ಆಚರಣೆಗಳ ಭಾಗವಾಗಿದೆ.[೬]

ಬಯಕಾರ ರಾಮಪ್ಪನು ಕಟ್ಟಿಸಿದ ಕೆರೆಗಳಲ್ಲಿ ಬಹುತೇಕ ಈ ತರಹದ ಆಚರಣೆಗಳು ಕಂಡುಬರುತ್ತವೆ. 'ಊರಿಗೊಂದು ಕೆರೆ ನೀರಿಗೊಂದು ಬಾವಿ' ಎಂಬಂತೆ ಈತನ್ನು ಕಟ್ಟಿಸಿದ ಕೆರೆಗಳು ಬಹುತೇಕ ಜೀವಜಲ ಆಗಿ ಇಂದಿಗೂ ಜೀವಂತ ಸಾಕ್ಷಿಗಳಾಗಿವೆ. ಕರ್ನಾಟಕದಾದ್ಯಂತ ೧೦೦ಕ್ಕೂ ಹೆಚ್ಚು ಮಳೆಯ ಆಚರಣೆಗಳು ಇದ್ದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವದನ್ನು ಕಾಣುತ್ತೇವೆ.

ದಕ್ಷಿಣ ಕರ್ನಾಟಕದ ಕೆಲವು ಭಾಗಗಳಲ್ಲಿ ಮಳೆರಾಯನ ವಿಗ್ರಹವನ್ನು ಮಾಡುತ್ತಾರೆ. ಅದನ್ನು ಹಲಗೆ ಮೇಲಿಟ್ಟು ಅರಿಶಿನ, ಕುಂಕುಮ ಮುತ್ತುಗ, ಮಲ್ಲಿಗೆ ಹೂವುಗಳಿಂದ ಅಲಂಕರಿಸಿ ಪೂಜಿಸುತ್ತಾರೆ. ನಂತರ ಬೆತ್ತಲೆ ಇರುವ ಓರ್ವ ಬಾಲಕನು ಮಳೆರಾಯನ ವಿಗ್ರಹವನ್ನು ಹೊತ್ತುಕೊಳ್ಳುತ್ತಾನೆ.

ಇವನ ಹಣೆಗೂ ಅರಿಶಿನ ಕುಂಕುಮ ಹಚ್ಚಿ ಕೊರಳಿಗೆ ಹೂಮಾಲೆಯನ್ನು ಹಾಕಿರುತ್ತಾರೆ. ಹೀಗೆ ಹೆಚ್ಚಿನ ಸಂಖ್ಯೆಯಲ್ಲಿ ಹುಡುಗರೆಲ್ಲರೂ ಸೇರಿಕೊಂಡು ವಿವಿಧ ಹಾಡುಗಳನ್ನು ಹಾಡುತ್ತಾರೆ. ಮಳೆರಾಯನ ವಿಗ್ರಹವನ್ನು ಹೊತ್ತ ಬಾಲಕನ ಜೊತೆಯಲ್ಲಿ ಮನೆ ಮನೆ ಬಾಗಿಲಿಗೆ ಹೋಗುತ್ತಾರೆ. ಪ್ರತಿಯೊಂದು ಮನೆ ಬಾಗಿಲಿಗೆ ಹೋದಾಗಲೂ ಮನೆಯ ಹೆಂಗಸರು ಮಳೆರಾಯನ ವಿಗ್ರಹ ಹೊತ್ತ ಹುಡುಗನ ತಲೆ ಮೇಲೆ ನೀರನ್ನು ಚುಮುಕಿಸಿ ಕಾಲಿನ ಮೇಲೆ ಒಂದೊಂದು ಕೊಡ ತಣ್ಣೀರನ್ನು ಸುರಿಯುತ್ತಾರೆ. ನಂತರ ವಿಗ್ರಹವನ್ನು ಅರಿಶಿನ ಕುಂಕುಮ ಹಚ್ಚಿ ಹೂವಿನ ಗರುಡಗಂಬಕ್ಕೆ ಎಣ್ಣೆ ಹಾಕಿ ಪೂಜೆ ದವಸ ಧಾನ್ಯ ಅಥವಾ ಹಣದ ರೂಪದ ಕಾಣಿಕೆಯನ್ನು ನೀಡುತ್ತಾರೆ.

ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತೋಟಕೆ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳೇ ತೋಟಕೆ ನೀರಿಲ್ಲ...

ಹೀಗೆ ಹಾಡುಗಳನ್ನು ಹೇಳುತ್ತಾ ಊರನ್ನೆಲ್ಲಾ ಸುತ್ತಿದ ಬಳಿಕ ಸಂಗ್ರಹಿಸಿದ ದವಸ ಧಾನ್ಯವನ್ನೆಲ್ಲಾ ಮಾರಾಟ ಮಾಡಿ ಬಂದ ಹಣದಿಂದ ಪುರಿ, ಬೆಲ್ಲ, ಕಾಯಿ, ಬಾಳೆಹಣ್ಣು, ಕರ್ಪೂರ ಮತ್ತು ಊದುಬತ್ತಿಗಳನ್ನು ತಂದು ಊರ ಹೊರಗಿನ ಕೆರೆ ಹತ್ತಿರ ಹೋಗಿ ಮಳೆರಾಯನಿಗೆ ಪೂಜೆ ಮಾಡಿ ಬಂದವರಿಗೆ ಚರ್ಪು ಹಂಚಿ ಕೆರೆಯಲ್ಲಿ ಮಳೆರಾಯನನ್ನು ಬಿಟ್ಟು ಬರುತ್ತಾರೆ.[2] ಕೆಲವು ಕಡೆ ಕಪ್ಪೆ ಮದುವೆ, ಕತ್ತೆ ಮೆರವಣಿಗೆ, ದೇವಸ್ಥಾನಗಳಿಗೆ ಹೋಗಿ ಪರ್ವ ಮಾಡುವುದು. ಹಾಗೆಯೇ ಕನಸಿನಲ್ಲಿ ಕುರಿಗಳ ಹಿಂಡು ಕಾಣಿಸಿದರೆ, ಕಲ್ಲಡಿ ಕಪ್ಪೆಗಳು ಕೂಗಿದರೆ, ದನಗಳು ಕತ್ತೆತ್ತಿ ಆಕಾಶವನ್ನು ಮೂಸಿದರೆ ಮಳೆಬರುತ್ತದೆ ಎಂಬ ನಂಬಿಕೆ ಇದೆ. ವಂಟಿಗೋಡು ಕೆರೆ, ಚಿಕ್ಕ ಕೆರೆಯಾಗಿನಹಳ್ಳಿ ಕೆರೆ, ಹುಲಿಕುಂಟ ಕೆರೆ, ಮುಂತಾದ ಕೆರೆಗಳಲ್ಲಿ ಈ ತರಹದ ಅನೇಕ ಆಚರಣೆಗಳನ್ನು ಕಾಣುತ್ತೇವೆ.

**ತೆಪ್ಪೋತ್ಸವ**

ಬಯಕಾರ ರಾಮಪ್ಪನ ಹಲವು ಕೆರೆಗಳಲ್ಲಿ ಕೆರೆ ತುಂಬಿ ಕೋಡಿ ಹರಿದಾಗ ತೆಪ್ಪೋತ್ಸವವನ್ನು ಮಾಡುತ್ತಾರೆ. ಊರಿನ ಜನರೆಲ್ಲ ಸೇರಿ ಮರದ ತುಂಡುಗಳಿಂದ ತೆಪ್ಪವನ್ನು ಕಟ್ಟುತ್ತಾರೆ. ಅದರ ಮೇಲೆ ಗ್ರಾಮದ ದೇವರುಗಳನ್ನು ಕೂರಿಸಿ, ಹೂ ದೀಪಗಳಿಂದ ಅಲಂಕರಿಸಿ ಕೆರೆಯ ನೀರನ ಮೇಲೆ ಮೂರು ಸುತ್ತು ಮೆರವಣಿಗೆ ಮಾಡುತ್ತಾರೆ. ಮಳೆ ಬಾರದೆ ಇದ್ದರೆ

ಗ್ರಾಮ ದೇವರುಗಳಿಗೆ ಅಭಿಷೇಕ ಮಾಡಿ ಪರವು ಮಾಡುತ್ತಾರೆ. ದೊಡ್ಡ ದೊಡ್ಡ ಕೆರೆಗಳಲ್ಲಿ ಈ ತರಹದ ಆಚರಣೆಯನ್ನು ಕಾಣುತ್ತೇವೆ. ಇತ್ತಿಚೆಗೆ ಈ ಆಚರಣೆಗಳು ವಿರಳವಾಗಿದ್ದು ಅಲಲ್ಲಿ ಕಂಡುಬರುತ್ತವೆ. ಈ ಆಚರಣೆಗಳನ್ನು ಇಂದು ಚಿಕ್ಕ ಕೆರೆಯಾಗಿನಹಳ್ಳಿ, ಹುಲಿಕುಂಟೆ ಕೆರೆ, ಚಿಲಕನಹಟ್ಟಿ ಕೆರೆಗಳಲ್ಲಿ ಕಂಡು ಬರುತ್ತದೆ.

**ಜನಪದ ಆಚರಣೆಗಳು**

ನಂಬಿಕೆಯ ತಳಹದಿಯ ಮೇಲೆ ಸಂಪ್ರದಾಯಗಳ ಹೆಸರಿನಲ್ಲಿ ನಿರ್ಧಿಷ್ಟ ಕಾಲದಲ್ಲಿ ಮಾಡುವ ಪೂಜೆ, ಪುನಸ್ಕಾರ, ಬಲಿ ನೀಡುವ ಕ್ರಮ ಮೊದಲಾದವುಗಳನ್ನು ಸರಳವಾಗಿ ಆಚರಣೆಗಳೆಂದು ಕರೆಯಬಹುದು. ಭಾರತವನ್ನು ಸಂಪ್ರದಾಯಗಳ ತವರೂರು ಎಂದು ಕರೆಯಲಾಗುತ್ತದೆ. ಮನುಷ್ಯನ ಹುಟ್ಟಿನಿಂದ ಸಾಯುವ ತನಕ ಹಲವು ಆಚರಣೆಗಳನ್ನು ಮಾಡುವುದನ್ನು ನಾವಿಲ್ಲಿ ಕಾಣಬಹುದು.

ಇಲ್ಲಿ ನೆಲೆಸಿರುವ ವಿವಿಧ ಜನಪದರು ತಮ್ಮದೇ ಆದ ನಂಬಿಕೆ ಮತ್ತು ಆಚರಣೆ ಹಾಗೂ ಸಂಪ್ರದಾಯಗಳನ್ನು ಹೊಂದಿದ್ದಾರೆ. ಇವುಗಳ ಮಧ್ಯೆ ಅವಿನಾಭಾವ ಸಂಬಂಧವಿದೆ. ಜನಪದರ ದೃಷ್ಠಿಯಲ್ಲಿ ಇವು ಜೀವನದ ಒಂದು ಭಾಗವಾಗಿವೆ. ಸಂಪ್ರದಾಯದ ತಳಹದಿಯ ಮೇಲೆ ನಂಬಿಕೆ, ನಂಬಿಕೆಯ ತಳಹದಿಯ ಮೇಲೆ ಆಚರಣೆ ನಿಂತಿರುತ್ತವೆ. ಹಬ್ಬಗಳಲ್ಲಿ ಎಡೆ ಇಡುವುದು ಸಂಪ್ರದಾಯ. ಇಟ್ಟ ಎಡೆಯನ್ನು ಹಿರಿಯರು ಬಂದು ಸ್ವೀಕರಿಸುತ್ತಾರೆಂಬುದು ನಂಬಿಕೆ. ಎಡೆಯನ್ನು ಹೇಗೆ ಇಡಬೇಕು, ಯಾವ ವಿಧಾನದಿಂದ, ಯಾರು ಎಡೆ ಇಡಬೇಕು, ಯಾವ ಯಾವ ಅಡುಗೆಗಳನ್ನು ಎಡೆಗಾಗಿ ಬಳಸಬೇಕು ಎನ್ನುವುದು ಆಚರಣೆ.

ಜನಪದರಿಂದ ಚಾಚೂ ತಪ್ಪದೆ ಆಚರಿಸುವ ಆಚರಣೆಗಳು ಸಂಸ್ಕೃತಿಯ ಪ್ರಸರಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇವುಗಳನ್ನು ವಿವಿಧ ಸಮುದಾಯಗಳ ಜನಪದರು ನಿರ್ದಿಷ್ಠ ಕಾಲದಲ್ಲಿ ನಡೆಸುವ ಹಬ್ಬ, ಜಾತ್ರೆ, ಉತ್ಸವ, ಹರಕೆ, ಕಾಣಿಕೆ–ಮುಡಪು, ಬಲಿ ಕೊಡುವ ಆಚರಣೆಗಳಲ್ಲಿ ಕಾಣಬಹುದಾಗಿದೆ.[೮] ಆಧುನಿಕ ಯುಗದಲ್ಲಿಯೂ ನಮ್ಮ ನಾಡಿನ ಉದ್ದಗಲಕ್ಕೂ ಧರ್ಮ ಮತ್ತು ಸಂಸ್ಕಾರದ ಹೆಸರಿನಲ್ಲಿ ಹಲವಾರು ಆಚರಣೆಗಳು ನಡೆಯುತ್ತವೆ. ಜನಪದರು ಚಾಚೂ ತಪ್ಪದೆ ನೆಡೆಸುವ ಪ್ರತಿ ಆಚರಣೆಗಳು ಆಯಾ ಸಮುದಾಯಗಳ ನಂಬಿಕೆ ಹಾಗೂ ಅವರ ಸಾಮಾಜಿಕ ಸ್ಥಿತಿಗೆ ಅನುಗುಣವಾಗಿ ನಡೆಯುತ್ತವೆ. ಜಾನಪದೀಯ ಆಚರಣೆಗಳಲ್ಲಿ ಕೆಲವು ಆಚರಣೆಗಳಿಗೆ ಫಲವಂತಿಕೆಯ ಹಿನ್ನೆಲೆ ಪ್ರಧಾನವಾಗಿದ್ದರೆ ಇನ್ನೂ ಕೆಲವು ಆಚರಣೆಗಳಿಗೆ

ವೈಯಕ್ತಿಕ ಹಿತಾಸಕ್ತಿಗಳ ಹಿನ್ನೆಲೆ ಇರುತ್ತದೆ. ಸಾಮಾನ್ಯವಾಗಿ ಸಂಪತ್ತು ಇಲ್ಲವೇ ಆರೋಗ್ಯ ಸುಧಾರಿಸುತ್ತದೆ ಎನ್ನುವ ಮನುಷ್ಯ ಸಹಜವಾದ ನಂಬಿಕೆ ಜನರಲ್ಲಿ ಇರುತ್ತದೆ. ಆ ಕಾರಣಕ್ಕಾಗಿಯೇ ಹಿಂದಿನಿಂದಲೂ ಅವು ಚಾಚೂ ತಪ್ಪದೆ ಇಂದಿನವರೆಗೂ ನಡೆದುಕೊಂಡು ಬರುತ್ತಿವೆ. ಬಯಕಾರ ರಾಮಪ್ಪನ ಅಧಿಕಾರ ವ್ಯಾಪ್ತಿಗೊಳಪಟ್ಟ ಭೌಗೋಳಿಕ ಪ್ರದೇಶಗಳಲ್ಲಿ ಹಲವಾರು ಜನಪದ ಆಚರಣೆಗಳು ನಡೆಯುತ್ತವೆ. ಅವುಗಳಲ್ಲಿ ಕೆಲವು ಆಚರಣೆಗಳು ಬಯಕಾರ ರಾಮಪ್ಪನಿಗೆ ಸಂಬಂಧಿಸಿದಂತೆ ನೆಡೆಯುವುದನ್ನು ಗುರುತಿಸಬಹುದು.

೧. ತಿಮ್ಮಲಾಪುರ, ಚಿಲಕನಹಟ್ಟಿ, ಗೊಲ್ಲರಹಳ್ಳಿ, ಹುಲಿಕುಂಟೆ, ಕೆರೆಯಾಗಳಹಳ್ಳಿ ಮೊದಲಾದಡೆ ಇರುವ ಕುದುರೆ ಮೇಲೆ ಕುಳಿತಿರುವ ವೀರಗಲ್ಲುಗಳನ್ನು ರಾಮಪ್ಪನಿಗೆ ಸಂಬಂಧಿಸಿದವು ಎಂದು ಜನರು ಆರಾಧಿಸುತ್ತಾರೆ.

೨. ಕೆಲ ಹಬ್ಬ ಹರಿದಿನಗಳಲ್ಲಿ ಬಯಕಾರ ರಾಮಪ್ಪನ ಹೆಸರಿನಲ್ಲಿ ಕೆಲ ವಿಶೇಷ ಪೂಜೆಗಳನ್ನು ಈ ಭಾಗದಲ್ಲಿ ನಡೆಸಲಾಗುತ್ತದೆ.

೩. ಗೋಪಿನಾಥ ದೇವಾಲಯದ ಜಾತ್ರೆ ಮತ್ತು ಉತ್ಸವದಲ್ಲಿ ರಾಮಪ್ಪನ ಹೆಸರಿನಲ್ಲಿ ಕೆಲ ವಿಶೇಷ ಆಚರಣೆಗಳನ್ನು ನಡೆಸುತ್ತಾರೆ.

೪. ಇಲ್ಲಿ ನಡೆಸುವ ರಥೋತ್ಸವ ನಂತರದಲ್ಲಿ ಫಲ ಪುಷ್ಪಗಳ ಪಾಲನ್ನು ಇತರರಿಗೆ ಹಂಚುವಂತೆ ಬಯಕಾರ ರಾಮಪ್ಪ ಪಾಲು ಎಂದು ವಿಶೇಷವಾಗಿ ಒಂದು ಪಾಲನ್ನು ಜನರಿಗೆ ಹಂಚಲಾಗುತ್ತದೆ.

೫. ನಂದಿಪುರ, ತಿಮ್ಮಲಾಪುರ ಮತ್ತು ಚಿಲಕನಹಟ್ಟಿ, ಬೇವಿನಹಳ್ಳಿ, ಹುಲಿಕುಂಟೆ, ಗೊಲ್ಲರಹಳ್ಳಿ, ಪೋತಲಕಟ್ಟೆ, ಜೋಗಿಕಲ್ಲು ಮೊದಲಾದ ಕಡೆ ಕೆಲವು ಕೆಳ ಸಮುದಾಯದ ಜನರು ವರ್ಷಕ್ಕೊಮ್ಮೆ ನಡೆಸುವ ಗಿಡದ ದೇವರ ಆಚರಣೆ ಸಂಧರ್ಭದಲ್ಲಿ ತಂಗಡಿ ಗಿಡದ ಮುಂಭಾಗಕ್ಕೆ ಮೂರು ಕಲ್ಲುಗಳನ್ನಿಟ್ಟು ಪೂಜೆ ಮಾಡುತ್ತಾರೆ. ಆ ಪೂಜೆಯನ್ನು ರಾಮಪ್ಪನ ಪೂಜೆ ಎಂದು ಕರೆಯುತ್ತಾರೆ.[೮]

ಅಡಿ ಟಿಪ್ಪಣಿಗಳು

೧. ನಾಯಕ ಡಿ.ಬಿ, (ಸಂ), ೨೦೦೫, ಜಾನಪದ ಲೇಖನಗಳು, ಪು.೧೨೦

೨. ಅದೇ...ಪು.ಸಂ.೧೧೫

೩. ಎಪಿಗ್ರಾಫಿ ಆಫ್ ಕರ್ನಾಟಕ, ೧೯೯೦, ೧೫೯

೪. ಸಿದ್ದರಾಮಯ್ಯ ಜಿ.ಎಸ್, ಉಷಾಕಿರಣ್,೨೦೦೬, ಸುಸ್ಥಿರಕೃಷಿ, ಪು.೪೦

೫. ಅದೇ...ಪು.೪೨

೬. ರಮೇಶ.ಸ.ಚಿ, ೨೦೧೦, ಕರ್ನಾಟಕದ ಜಾನಪದ ಆಚರಣೆಗಳು, ಪು.೧೩೫

೭. ಬೋರಲಿಂಗಯ್ಯ ಹಿ.ಚಿ. (ಸಂ), ೧೯೯೬, ಕರ್ನಾಟಕ ಜಾನಪದ ಕಲೆಗಳ ಕೋಶ, ಪು.೧೬೪

೮. ತಿಪ್ಪೇಸ್ವಾಮಿ, ಎಚ್. ೨೦೧೪, ಬಯಕಾರ ರಾಮಪ್ಪನ ಜನಪರ ಸೇವೆ, ಪು.೬೮

೯. ಅದೇ...ಪು.೬೯

# ಅಧ್ಯಾಯ ಐದು

## ಉಪಸಂಹಾರ

ಬಯಕಾರ ರಾಮಪ್ಪಯ್ಯನ ಕೆರೆಗಳು ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧದಲ್ಲಿ ಬಯಕಾರ ರಾಮಪ್ಪನ ಕೆರೆಗಳ ಇತಿಹಾಸ, ತಾಂತ್ರಿಕತೆ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ದಾಖಲಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಭೂಮಿಯ ಮೇಲೆ ಮಾನವ ನೆಲೆಸಲು ನೀರು ಮಹತ್ವದ್ದಾಗಿದೆ ಆದ್ದರಿಂದ ಸಕಲ ಜೀವರಾಶಿಯು ಜೀವಿಸಲು ನೀರು ವರದಾನವಾಗಿದೆ. ಆಹಾರಯಿಲ್ಲದೆ ಮಾನವನು ಒಂದು ವಾರದ ಮಟ್ಟಿಗೆ ಜೀವಿಸಬಲ್ಲ ಆದರೆ ನೀರು ಇಲ್ಲದೆ ಜೀವಿಸಲು ಅಸಾಧ್ಯ. ಆರಂಭದ ಕಾಲಘಟ್ಟದಲ್ಲಿ ಮಾನವ ಅಲೆಮಾರಿಯಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆಮಾರಿಯಾಗಿ ತಿರುಗುತ್ತಿದ್ದ ಸಮಯದಲ್ಲಿ ಆತನಿಗೆ ಒಂದು ಕಡೆ ನೆಲೆ ನಿಲ್ಲಲ್ಲು ನೀರು ಮುಖ್ಯವಾಗಿತ್ತು. ಜಗತ್ತಿನಲ್ಲಿ ಪ್ರತಿಯೊಂದು ಜೀವಿಗೆ ನೀರು ಪ್ರಮುಖವಾದದ್ದು. ನಂತರ ನಾಗರಿಕತೆಗಳು ಸೂಕ್ಷ್ಮವಾಗಿ ಬೆಳೆದಂತೆಲ್ಲ ನೀರನ್ನು ಸಂಗ್ರಹಿಸುವ ಕಾಯಕ ಪ್ರಾರಂಭವಾಯಿತ್ತು.

ವಿಜಯನಗರದ ಅಂತ್ಯಕಾಲದಲ್ಲಿ ಅನೇಕ ಸಾಮಂತರು ಸ್ವತಂತ್ರರಾಗಿ ತಮ್ಮದೇ ಆದ ಪಾಳೆಯಪಟ್ಟುಗಳನ್ನು ಕಾಲಕ್ರಮೇಣ ನಿರ್ಮಿಸಿಕೊಂಡರು. ಬಯಕಾರ ರಾಮಪ್ಪನು ಅಚ್ಯುತ ದೇವರಾಯನ ಕಾಲಾವಧಿಯಿಂದ ಹಿಡಿದು ರಾಮರಾಯನ ಕಾಲದವರೆಗೆ ಯಾವುದೇ ಬದಲಿ ಅಧಿಕಾರಿಗಳ ತರ ಆಸೆ ಪಡದೆ ಜನರಿಗಾಗಿ ಹಾಗೂ ಅವರ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದಂತಹ ಧಿಮಂತವಾಧಿ, ಇದ್ದ ಅಧಿಕಾರದಲ್ಲೆ ಸೇವೆನಿಷ್ಠೆಯಿಂದ ಅಧಿಕಾರ ಮಾಡಿದನು. ಈತನ ಕಾಲಾವಧಿಯಲ್ಲಿ ಕೈಗೊಂಡಂತಹ ಪ್ರಜಾಹಿತ ಕಾರ್ಯಗಳು ಈತನನ್ನು ಶ್ರೇಷ್ಟ ವ್ಯಕ್ತಿಯಾಗಿ ಇತಿಹಾಸದಲ್ಲಿ ಶ್ರೇಷ್ಟ ಸಾಧಕನಾಗಿ ಬಿಂಬಿಸಿದ್ದಾರೆ. ಈತನು ಕಟ್ಟಿಸಿದ ಕೆರೆಗಳು ಎಲ್ಲೆಲ್ಲಿ ದೊರೆತಿವೆಯೊ ಅಲ್ಲಿಯವರೆಗೂ ಈತನ ಅಧಿಕಾರ ಇದ್ದಿರಬೇಕು. ಬಯಕಾರ ರಾಮಪ್ಪ ಹೊರಡಿಸಿದ ಶಾಸನಗಳು ಮತ್ತು ದೊರೆಯುವ ಇತರೆ ಆಕರಗಳನ್ನು ಆಧಾರವಾಗಿಟ್ಟುಕೊಂಡು ಆತನ ಜನಪರ ಸೇವೆಯ ವಿವಿಧ ಆಯಾಮಗಳನ್ನು ಮೊದಲಬಾರಿಗೆ ಇಲ್ಲಿ ವಿವೇಚಿಸಲಾಗಿದೆ.

ಬಯಕಾರ ರಾಮಪ್ಪನು ಹೊರಡಿಸಿದ ಕೆರೆಗಳು ಸಾವಿರಾರು ಎಕರೆ ಭೂಮಿಗೆ ನೀರೊದಿಗಿಸಿವೆ. ಅಲ್ಲದೆ ಇಲ್ಲಿನ ಬರಡು ಭೂಮಿಯನ್ನು ಹಚ್ಚ ಹಸಿರಾಗಿಸಿ, ಅಸಂಖ್ಯಾತ ಜೀವ ಸಂಕುಲಗಳಿಗೆ ಆಶ್ರಯ ತಾಣಗಳಾಗಿವೆ. ಇವು ಆತನ ಸಮಾಜಮುಖಿ ಚಟುವಟಿಕೆಗಳಿಗೆ

ಸಾಕ್ಷಿಗಳಾಗಿದ್ದು, ಆತನ ಜನಪರ ಸೇವೆಯನ್ನು ನಮಗೆ ಪರಿಚಯಿಸುತ್ತವೆ. ಪ್ರಸ್ತುತ ಪ್ರಬಂಧದಲ್ಲಿ ಕೆರೆಗಳ ನಿರ್ಮಾಣ, ಉದ್ದೇಶ, ನಿರ್ವಹಣೆ, ಕೆರೆಗಳ ಕುರಿತಾದ ಆಚರಣೆ, ಸಮಾಜದಲ್ಲಿ ಕೆರೆ ನೀರಿನ ಬಳಕೆಗೆ ಇದ್ದ ನಿಬಂಧನೆಗಳು, ಕೆರೆಯೊಂದಿಗಿನ ನಂಬಿಕೆ ಮತ್ತು ಆಚರಣೆಗಳು ಹಾಗೂ ಕೆರೆಯ ದಂಡೆಯ ಮೇಲೆ ಇರುವ ದೇವಾಲಯ ಕೆರೆಯಾ ಸ್ಥಿತಿಗತಿಯ ಜೊತೆಗೆ ನೀರಿನ ಉಪಯೋಗ ಬೆಳೆಯುವಂತಹ ಬೆಳೆಗಳ ಕುರಿತಂತೆ ತಿಳಿಯುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಅಧ್ಯಯನದ ಫಲಿತಗಳು**

ಬಯಕಾರ ರಾಮಪ್ಪನ ಕೆರೆಗಳ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದ್ದು. ರಾಮಪ್ಪನ ಕೆರೆಗಳು ಕಂಡುಬರುವ ಪ್ರದೇಶಗಳ ಮಾಹಿತಿಯ ಜೊತೆಗೆ ಕೆರೆ, ಕಟ್ಟೆಯ ನೀರು ಹರಿಯುತ್ತಿದ್ದು, ಕೆಲವು ಕೆರೆಗಳನ್ನು ಜೀವಂತವಾಗಿಸಿ ಕೃಷಿ ಚಟುವಟಿಕೆಗಳಿಗೆ ಅನುವು ಮಾಡಿಕೊಟ್ಟಿವೆ. ಹೆಚ್ಚಿನ ಕೆರೆಗಳು ಮಳೆಯನ್ನು ಆಧಾರಿಸಿವೆ. ಅವುಗಳಿಂದ ಅಂತರ್ಜಲ ಮಟ್ಟ ಕಾಯ್ದುಕೊಳ್ಳಲು ಬೇಸಿಗೆಯಲ್ಲಿ ಕೆರೆ ಅಂಗಳದಲ್ಲಿ ನೀರನ್ನು ಸಂಗ್ರಹಿಸಲು, ನೀರಾವರಿ ಇಲಾಖೆಯವರು ತೂಬುಗಳನ್ನು ಮುಚ್ಚುವಂತೆ ಕ್ರಮಕೈಗೊಂಡಿದ್ದಾರೆ. ಭಾರತ ದೇಶದಲ್ಲಿ ನೀರಾವರಿಯ ವ್ಯವಸ್ಥೆಗೆ ಸಂಬಂಧಪಟ್ಟಂತೆ ಪುರಾತನ ಕಾಲದಿದಲೂ ಕೃಷಿಯಲ್ಲಿ ನೀರಾವರಿ ಬಳಕೆಯಿದೆ.

ಕೆರೆ, ಕಟ್ಟೆ, ಕಾಲುವೆಗಳು ಬಹುಹಿಂದಿನಿಂದಲೂ ನೀರಾವರಿ ಮೂಲಗಳಾಗಿದ್ದು. ಪ್ರಾಗೈತಿಹಾಸ ಕಾಲದ ಮಾನವನು ನೀರಿನ ಇರುವೆಕೆಯಲ್ಲಿ ವಾಸವಿದ್ದ. ಆದ್ದರಿಂದ ಈ ಕೆರೆಗಳು ಅವುಗಳ ನಿದರ್ಶನವಾಗಿವೆ. ಪ್ರಸ್ತುತ ಈ ಅಧ್ಯಯನದಲ್ಲಿ ಅಧಿಕಾರಿಗಳು, ಜನಸಾಮಾನ್ಯರು, ಕೆರೆಗಳ ಬಗ್ಗೆ ಇರುವ ಐತಿಹ್ಯ, ಶಾಸನಗಳನ್ನು ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಇದರಿಂದ ಬಯಕಾರ ರಾಮಪ್ಪನ ಕೆರೆಗಳನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ. ನಮ್ಮ ಪೂರ್ವಿಕರು ಕೆರೆಗಳಿಗೆ ವಿವಿಧ ಹೆಸರಗಳನ್ನು ಇಡುವುದನ್ನು ಕಾಣುತ್ತೇವೆ. ಆದರೆ ಬಯಕಾರ ರಾಮಪ್ಪನ ಕೆರೆಗಳಿಗೆ ಆತನ ಸಂಬಂಧಿಕರ ಹಾಗೂ ತನ್ನ ಕುಟುಂಬಸ್ಥರ ಹೆಸರನ್ನು ಇಟ್ಟಿರುವುದು ವಿಶೇಷ. ಆದ್ದರಿಂದ ಅಧ್ಯಯನದಲ್ಲಿ ಇವುಗಳ ಬಗ್ಗೆ ಮಾಹಿತಿ ಒದಗಿಸಲಾಗಿದೆ. ಕೆರೆಗಳನ್ನು ಅರಸರು ತಮ್ಮ ಗೌರವ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಮತ್ತು ತಂದೆ ತಾಯಿಯರ ಹಾಗೂ ಯುದ್ಧಗಳಲ್ಲಿ ಜಯಗಳಿಸಿದ ಸ್ಮರಣಾರ್ಥವಾಗಿ ನಿರ್ಮಿಸುತ್ತಿದ್ದರು. ಆದರೆ ಬಯಕಾರ ರಾಮಪ್ಪನು ಅಧಿಕಾರದಲ್ಲಿರುವಾಗ ಯಾವುದೇ ದುರುದ್ದೇಶಗಳಿಲ್ಲದೆ. ಕೇವಲ ಕುಟುಂಬಸ್ಥರ

ಪುಣ್ಯ ಪ್ರಾಪ್ತಿಗಾಗಿ ಹಾಗೂ ಪ್ರಜಾಗಳ ಹಿತಾಸಕ್ತಿಗಾಗಿ ಕೆಗಳನ್ನು ಕಟ್ಟಿಸಿದ್ದಾನೆ ಆದ್ದರಿಂದ ಈ ಅಧ್ಯಯನವು ಆತನ ಕೆರೆಗಳನ್ನು ಒಳಗೊಂಡಿದ್ದು ಈ ಕುರಿತು ದಾಖಲಿಸಲಾಗಿದೆ ಬಯಕಾರ ರಾಮಪ್ಪನ ಕಾಲಾವಧಿಯಲ್ಲಿ ಕೆರೆಗಳ ಜೊತೆಗೆ ಅನೇಕ ಅಗ್ರಹಾರ, ದೇವಾಸ್ಥಾನಗಳನ್ನು ನಿರ್ಮಿಸಿದ್ದಾನೆ ಅವುಗಳನ್ನು ಇಲ್ಲಿ ದಾಖಲಿಸಲಾಗಿದೆ.

ಕೆರೆಗಳ ಸ್ವರೂಪ ರಚನೆಯ ದೃಷ್ಟಿಯಿಂದ ಬಯಕಾರ ರಾಮಪ್ಪನ ಎಲ್ಲಾ ಕೆರೆಗಳು ಒಂದೇ ತೆರನಾಗಿ ಕಂಡು ಬರುವುದಿಲ್ಲ. ಬಹುತೇಕ ಕೆರೆಗಳು ಅರ್ಧ ಚಂದ್ರಾಕೃತಿ, ಆಯುತಾಕೃತಿ ಮತ್ತು ವೃತ್ತಾಕಾರದ ಕೆರೆಗಳಾಗಿವೆ. ಭೌಗೋಳಿಕ ಪರಿಸರಕ್ಕನುಗುಣವಾಗಿ ಇಲ್ಲಿನ ಕೆರೆಗಳು ಹೆಚ್ಚು ಆಳವಿಲ್ಲದೆ ತಟ್ಟೆಯಂತೆ ಹರಡಿಕೊಂಡಿವೆ. ಬಯಲುಸೀಮೆ ಪ್ರದೇಶಗಳಲ್ಲಿ ಬಹುತೇಕ ಕೆರೆಗಳನ್ನು ಬೆಟ್ಟಗುಡ್ಡದ ಹತ್ತಿರವೇ ನಿರ್ಮಿಸಿರುವುದರಿಂದ ಉತ್ತಮ ಜಲಾನಯನ ಪ್ರದೇಶ ಹೊಂದಿದೆ. ಎಲ್ಲಾ ಕೆರೆಗಳ ಜಲಾನಯನ ಪ್ರದೇಶದಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ ಪ್ರಮಾಣವು ಕೂಡ ಸಮನಾಂತರವಾಗಿ ಇದೆ. ಕೆರೆಗಳನ್ನು ಸರಣಿ ವ್ಯವಸ್ಥೆಯಲ್ಲಿ ನಿರ್ಮಿಸಿರುವುದು ಅಂದಿನ ತಾಂತ್ರಿಕತೆಗೆ ಹಿಡಿದ ಕೈಗನ್ನಡಿ. ಪರಿಸರಕ್ಕೆ ಅನುಗುಣವಾಗಿ ಮೂರು ನಾಲ್ಕು ಕೆರೆಗಳನ್ನು ಒಂದಕ್ಕೊಂದು ಹೊಂದಿಕೊಂಡಿರುವಂತೆ ಸಮೀಪದಲ್ಲಿ ಕಟ್ಟಿದ್ದಾರೆ.

ಹಾಗೆಯೇ ಏರಿಯನ್ನು ಸಮಾನಂತರವಾಗಿ ನೇರವಾಗಿ ನಿರ್ಮಾಣ ಮಾಡಿದ್ದಾರೆ. ಏರಿಯಾ ಒಳಪಾರ್ಶ್ವದ ಇಳಿಜಾರಿಗೆ ಸ್ಥಳೀಯವಾಗಿ ದೊರೆಯುವ ಬೆಟ್ಟದ ಕಲ್ಲುಗಳಿಂದಲೇ ಕಟ್ಟಲಾಗಿದೆ. ಕೆರೆಯಲ್ಲಿ ಸಂಗ್ರಹವಾದ ನೀರನ್ನು ತೂಬುಗಳಿಂದ ಅಚ್ಚುಕಟ್ಟು ಪ್ರದೇಶಕ್ಕೆ ಏಕ ಕಾಲದಲ್ಲಿ ಹಾಯಿಸಲಾಗುತ್ತಿದೆ. ಕೆರೆಯ ಗಾತ್ರಕ್ಕೆ ಅನುಗುಣವಾಗಿ ಒಂದು, ಎರಡು, ಮೂರು ಅಥವಾ ನಾಲ್ಕು ತೂಬುಗಳನಿಟ್ಟಿರುವುದು ವಿಶೇಷ. ಕೆರೆಗಳ ರಕ್ಷಣೆಯ ದೃಷ್ಟಿಯಿಂದ ಕೆಲವು ಕೆರೆಗಳಲ್ಲಿ ಎರಡು ಕೋಡಿಗಳಿದ್ದರೆ, ಇನ್ನುಳಿದ ಕೆರೆಗಳಲ್ಲಿ ಒಂದು ಕೋಡಿ ಇರುತ್ತದೆ. ಕೆರೆಯ ಗಾತ್ರವನ್ನು ಅವಲಂಬಿಸಿ ಕೋಡಿಗಳನ್ನು ನಿರ್ಮಿಸಲಾಗಿದೆ. ಕೆರೆಗಳ ನಿರ್ಮಾಣ, ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಮಂತ್ರಿಗಳು, ಸಂಧಿವಿಗ್ರಹಿಗಳು, ಊರಗೌಡರು, ಜಲಸೂತ್ರಧಾರರು, ಶಾನುಭೋಗರು, ನೀರ್ಗಂಟಿಗಳು, ತಳವಾರರು, ಗ್ರಾಮ ಪಂಚಾಯಿತಿಯ ಅಧಿಕಾರಿಗಳು ಮತ್ತು ಜನ ಸಾಮಾನ್ಯರು ಪ್ರಮುಖ ಪಾತ್ರವಹಿಸುತ್ತಿದ್ದರು. ಪ್ರಾಚೀನ ನೀರ್ಗಂಟಿ ವ್ಯವಸ್ಥೆ ಇವತ್ತಿಗೂ ಇರುವುದನ್ನು ನನ್ನ ಅಧ್ಯಯನದಲ್ಲಿ ಗುರುತಿಸಿದ್ದೇನೆ. ನೀರ್ಗಂಟಿಗಳು ತೂಬುಗಳ ನಿರ್ವಹಣೆ ಕಾರ್ಯವನ್ನು ಹಿಂದಿನಿಂದಲೂ ನಿರ್ವಹಿಸುತ್ತಿದ್ದರು. ಇವರು ವಂಶಪಾರಂಪರ್ಯವಾಗಿ ನೇಮಕವಾಗಿತ್ತಿದ್ದರು. ಅವರು ಹೆಚ್ಚಾಗಿ ತಳವಾರ (ವಾಲ್ಮೀಕಿ), ಬಾರಿಕರ ಜಾತಿಗೆ

ಸೇರಿದವರರಾಗಿರುತ್ತಿದ್ದರು. ಕಾಲ ಬದಲಾದಂತೆ ಶಿಕ್ಷಣ ಪಡೆದಂತೆಲ್ಲಾ ವೃತ್ತಿಗಳು ಹಂಚಿಕೆಯಾದಂತೆಲ್ಲಾ ಬೇರೆ ಜನಾಂಗದವರೂ ನೀರ್ಗಂಟಿ ವೃತ್ತಿ ಮಾಡಲು ಆರಂಭಿಸಿದರು. ಕೆರೆ ಮತ್ತು ದೇವಾಲಯಗಳು ನಮ್ಮ ಗ್ರಾಮಗಳ ಸಾಂಸ್ಕೃತಿಕ ಪ್ರತೀಕವಾಗಿ ಬೆಳೆದುಬಂದಿವೆ. ಕೆರೆ ನೀರಿನ ಫಲಾನುಭವಿಗಳಲ್ಲಿ ದೇವಾಲಯದ ಭೂಮಿಗಳಿಗೆ ಮೊದಲ ಆದ್ಯತೆಯಿದ್ದು, ನಂತರ ಕೆರೆ ನಿರ್ಮಾತೃ, ನಿರ್ವಹಣೆ ಕಾಮಗಾರಿಗಳಿಗೆ ಪ್ರಾಧಾನ್ಯತೆ ನೀಡಿರುವುದು ಗಮನಿಸತಕ್ಕ ವಿಷಯ.

ಕೆರೆಗಳು ಧಾರ್ಮಿಕ ನಂಬಿಕೆ ಮತ್ತು ಆಚರಣೆಯ ತಾಣವಾಗಿರುವುದನ್ನು ನನ್ನ ಅಧ್ಯಯನದಲ್ಲಿ ಗುರುತಿಸಿದ್ದೇನೆ. ಕೆಲವು ಕೆರೆಗಳಲ್ಲಿ ಸ್ತ್ರೀಯರು ಬಟ್ಟೆ ತೊಳೆಯುವಂತಿಲ್ಲ ಹಾಗೂ ಸ್ನಾನ ಮಾಡುವಂತಿಲ್ಲ ಎಂಬ ನಿಬಂಧನೆ ಪೋತಲಕಟ್ಟೆ ಕೆರೆಯಲ್ಲಿದೆ. ಸಾವಿನ ಸೂತಕದವರು ಕೆರೆ ನೀರಿಗೆ ಇಳಿಯಬಾರದು ಎಂಬ ನಿಬಂಧನೆಯು ಇದೆ. ಕೆರೆಗೆ ಸಂಬಂಧಿಸಿದ ಆಚರಣೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಕೃಷಿಯನ್ನೇ ಅವಲಂಬಿಸಿದ ರೈತ ಅನೇಕ ಬಗೆಯ ನಂಬಿಕೆಗಳನ್ನು ಹೊಂದಿದ್ದಾನೆ. ಅವು ಮೌಢ್ಯತೆಯಿಂದಿವೆಯೊ, ವೈಜ್ಞಾನಿಕವಾಗಿವೆಯೋ ಎಂಬ ಪ್ರಶ್ನೆ ಅಪ್ರಸ್ತುತ. ಇಲ್ಲಿ ಭಾಗಶಃ ಮಳೆತರಿಸುವ ಮನುಷ್ಯನ ಪ್ರಯತ್ನವನ್ನು ಗುರುತಿಸಲಾಗಿದೆ. ಹಾಗೇಯೇ ಕೆರೆಗಳಲ್ಲಿ ಕೆರೆಬಂದಮ್ಮ, ದೇವಕನ್ಯೆಯರು ವಾಸಿಸುತ್ತಿದ್ದರು ಎಂಬ ನಂಬಿಕೆಗಳು ಇದ್ದು,

ಗ್ರಾಮದವರು ಗ್ರಾಮದೇವತೆಗಳಿಗಿಂತಲೂ ಅಧಿಕವಾಗಿ ಪೂಜ್ಯನೀಯ ಭಾವನೆಯನ್ನು ಕೆರೆ ಅಧಿದೇವತೆಗಳಿಗೆ ನೀಡಿದ್ದಾರೆ. ಇದರಿಂದ ಹಲವು ಬಗೆಯ ಆಚರಣೆಗಳು ನೆಡೆಯುತ್ತಿವೆ. ಉದಾಹರಣೆಗೆ ಗಂಗಮ್ಮನ ಪೂಜೆ, ಗಂಗಾಸ್ನಾನ, ಬಾಗಿನ ಅರ್ಪಣೆ, ಕೆರೆ ತುಂಬಿ ಕೋಡಿ ಬಿದ್ದಾಗ ತೆಪ್ಪೋತ್ಸವದಂತಹ ಆಚರಣೆಗಳು ಪ್ರಚಲಿತದಲ್ಲಿವೆ. ಇವುಗಳ ಜೊತೆಗೆ ನಾಗರಪೂಜೆ ರೂಢಿಯಲ್ಲಿವೆ. ಕೆರೆಗಳು ಮೀನುಗಳ ಸಾಕಾಣಿಕೆಗೆ ಮತ್ತು ಜಾನುವಾರುಗಳ ಕುಡಿಯುವ ನೀರಿಗಾಗಿ ಬಳಕೆಯಾಗುತ್ತಿವೆ. ಬೇಸಿಗೆ ಕಾಲದಲ್ಲಿ ಕೆರೆಗಳಲ್ಲಿ ನೀರು ಕಡಿಮೆಯಾದಾಗ ಕೆರೆಯ ಅಂಗಳದಲ್ಲಿ ಪಶುಪಾಲಕರು ಜಾನುವಾರಗಳನ್ನು ಮೇಯಿಸುತ್ತಾರೆ ಹಾಗೂ ಕೆರೆಯ ಮಣ್ಣನ್ನು ಉಪಯೋಗಿಸಿಕೊಂಡು ಜನಪದರು ಇಟ್ಟಿಗೆ ತಯಾರಿಸುತ್ತಿದ್ದಾರೆ ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ. ಇದರಿಂದ ಉದ್ಯೋಗದ ಜತೆಗೆ ಆರ್ಥಿಕ ಪ್ರಗತಿಯು ಉತ್ತಮಗೊಳ್ಳುತ್ತಿದೆ. ಕೆರೆಗಳ ಮಣ್ಣು ತೋಟಗಳಿಗೆ ಗೊಬ್ಬರವಾಗಿ ಮತ್ತು ಮನೆಗಳನ್ನು ಕಟ್ಟಲು ಬಳಕೆಯಾಗುತ್ತಿದೆ ಮಳೆಗಾಲೇತರ ಋತುಮಾನಗಳ ಅವಧಿಯಲ್ಲಿ ಈಗಲೂ ಕೆರೆಯಂಗಳದಲ್ಲಿ ನೀರಿಲ್ಲದಿದ್ದಾಗ ಕಡಲೆ, ಜೋಳದ ಬೆಳೆಗಳನ್ನು ತೆಗೆಯುತ್ತಾರೆ. ಈ ಕೆರೆಗಳ ಅಸ್ತಿತ್ವದಿಂದಾಗಿ ಗ್ರಾಮಗಳು ತೀವ್ರ

ಬರಗಾಲದಿಂದ ಪಾರಾಗಿವೆ. ಏಕೆಂದರೆ ಇವು ಜನರ ಜೀವನದ ಪ್ರಾಥಮಿಕ ಪೂರೈಕೆಗಳಾಗಿವೆ. ಕೆರೆಗಳಿಂದ ಅಂತರ್ಜಲ ಮಟ್ಟ ಹೆಚ್ಚಾಗುತ್ತಿದೆ. ಗ್ರಾಮಗಳ ಬಾವಿ, ಕೊಳ ಮತ್ತು ಕೊಳವೆಬಾವಿಗಳ ಅಂತರ್ಜಲ ಮಟ್ಟ ಏರಿರುವುದು ಪ್ರಸ್ತುತ ಅಧ್ಯಯನದಿಂದ ಕಡುಕೊಂಡ ಅಂಶ. ಬಯಕಾರ ರಾಮಪ್ಪನ ಕೆರೆಗಳು ಮಳೆಯಾಶ್ರಿತ ಕೆರೆಗಳಾಗಿದ್ದು ಈ ದಿನಗಳಲ್ಲಿ ಕೆರೆಗಳಿಗೆ ರಕ್ಷಣೆ ಇಲ್ಲದೆ ಹೂಳು ತುಂಬಿ ನಾಶವಾಗುವ ಅಂಚಿನಲ್ಲಿವೆ. ಆಧುನಿಕ ಮತ್ತು ಜಾಗತೀಕರಣದ ಇಂದಿನ ದಿನಗಳಲ್ಲಿ, ಪ್ರಾಚೀನವಾಗಿ ಕೆರೆಗಳ ಬಗ್ಗೆ ಇದ್ದ ನಂಬಿಕೆ, ಆಚರಣೆಗಳು, ಸಂಪ್ರದಾಯಗಳು ಇಂದು ಕಣ್ಮರೆಯಾಗುತ್ತಿರುವುದು ಖೇದಕರದ ವಿಷಯವಾಗಿದೆ.

ಕೆರೆಗಳು ಹೂಳು ತುಂಬಿಕೊಂಡು ನೀರನ್ನು ಹಿಡಿದಿಡಲು ಸಾಧ್ಯವಿಲ್ಲದಿರುವ ಎಲ್ಲಾ ಕೆರೆಗಳು ಇಂದು ಅವನತಿಯ ಆದಿಯಲ್ಲಿವೆ. ಬಯಕಾರ ರಾಮಪ್ಪನ ಕುರಿತು ಇಲ್ಲಿಯವರೆಗೆ ನಡೆದಿರುವ ಕೆಲ ವಿರಳವಾದ ಅಧ್ಯಯನಗಳ ಕುರಿತು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈತನು ತನ್ನ ಅಧಿಕಾರಾವಧಿಯಲ್ಲಿ ಕೈಗೊಂಡ ಜನಪರ ಸೇವೆಯ ಮಹತ್ವ ಕುರಿತು ಒಂದೆಡೆ ಇಡಿಯಾಗಿ ಮಾಹಿತಿ ಲಭ್ಯವಾಗುವ ರೀತಿ ಮೊದಲಬಾರಿಗೆ ಇಲ್ಲಿ ಮಾಡಲಾಗಿದೆ. ಆದಾಗ್ಯೂ ಅಂದಿನ ಅಧ್ಯಯನ ನಡೆಸುವುದಕ್ಕೆ ಹೇರಳವಾದ ಅವಕಾಶಗಳಿವೆ.

ಇದುವರೆಗೆ ಹಲವಾರು ವಿದ್ವಾಂಸರು ಅಧ್ಯಯನ ನಡೆಸಿರುವ ಹಾದಿಯಲ್ಲಿಯೇ ಮುಂದುವರೆದು, ಬಯಕಾರ ರಾಮಪ್ಪನಿಂದ ವಿವಿಧ ಕಾಲದಲ್ಲಿ ಹೊರಡಿಸಲ್ಪಟ್ಟ ಶಾಸನಗಳು ಮತ್ತು ಇತರೆ ಆಕರಗಳು ವಿಶ್ಲೇಷಿಸುವ ಜನಪರ ಸೇವೆಯನ್ನು ಮತ್ತು ಅದರ ವೈಶಿಷ್ಟ್ಯವನ್ನು ಗುರುತಿಸುವಲ್ಲಿ ಪ್ರಸ್ತುತ ವಿಷಯದ ವಿಶ್ಲೇಷಣೆಗೆ ಇತರ ಆಕರಗಳನ್ನು ಬಳಸಿಕೊಂಡು ಅವುಗಳ ಕುರಿತು ಚರ್ಚಿಸಿರುವುದು ಈ ಅಧ್ಯಯನದ ವಿಶೇಷವಾಗಿದೆ.

ದೇವಾಲಯ, ಕೋಟೆ, ಶಾಸನಗಳು ಹಾಗೂ ಕೆರೆ, ಬಾವಿಗಳು ಇರುವ ಬಹುತೇಕ ಪ್ರದೇಶಗಳಲ್ಲಿ ವಿಭಿನ್ನ ರೀತಿಯ ಐತಿಹ್ಯಗಳಿವೆ. ಅನೇಕ ಸ್ಥಳೀಯರು ಇವುಗಳ ಬಳಿ ನಿಧಿ ಇದೆ, ಇವುಗಳನ್ನು ಸರ್ಪ ಕಾಯುತ್ತಿದೆ ಹಾಗೂ ಇದನ್ನು ಜಕಣಾಚಾರಿ ನಿರ್ಮಿಸಿದ್ದಾನೆಂಬ ಅನೇಕ ಐತಿಹ್ಯಗಳನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿನ ಬಾವಿ ಅಥವಾ ಕೆರೆಯಲ್ಲಿ ಬಂಗಾರದ ಸಿಂಹಾಸನ ಮುಳುಗಿದೆ ಎಂದು ನಂಬಿದ್ದಾರೆ. ಈ ರೀತಿಯ ಐತಿಹ್ಯಗಳ ಕುರಿತು ವಿವಿಧ ದೃಷ್ಟಕೋನಗಳಿಂದ ಅಧ್ಯಯನ ಮಾಡಬೇಕಾದ ಅಗತ್ಯತೆ ಇದೆ. ಅಲ್ಲದೇ ಬಯಕಾರ ರಾಮಪ್ಪನ ಜನಪರ ಸೇವೆಯ ಕುರಿತು ಸುದೀರ್ಘವಾಗಿ ವಿವಿಧ ಆಯಾಮಗಳಿಂದ ಇನ್ನೂ ಹೆಚ್ಚಿನ ಮಟ್ಟದಲ್ಲಿ ಅಧ್ಯಯನ ಮಾಡಲು ಅವಕಾಶವೂ ಇದೆ.

## ಅನುಬಂಧಗಳು

ಆಧಾರಗ್ರಂಥಗಳು

ಪದಕೋಶ

ಕೋಷ್ಟಕ

ಭೂಪಟಗಳು

ಛಾಯಾಚಿತ್ರಗಳು

## ಆಧಾರ ಗ್ರಂಥಗಳು

ಎಪಿಗ್ರಾಫಿಯ ಕರ್ನಾಟಿಕ (ಹೊಸ ಸಂಪುಟ) ೧ ರಿಂದ ೧೦

ಎಚ್. ತಿಪ್ಪೇಸ್ವಾಮಿ., ೨೦೧೪, ಬಯಕಾರ ರಾಮಪ್ಪನ ಜನಪರ ಸೇವೆ, ಶ್ರೀ ಮಾಲತೇಶ ಪ್ರಕಾಶನ. ಬೆಂಗಳೂರು.

ಎಸ್.ಎನ್.ಶಿವರುದ್ರಸ್ವಾಮಿ., ೨೦೦೦, ಬಯಕಾರ ರಾಮಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಿ.ಮಹದೇವ, ಎ.ಸುಬ್ಬಣ್ಣ ರೈ, ಮಾಧವ ಪೆರಾಜೆ., ೨೦೦೨, ಹೊಸಪೇಟೆ ತಾಲೂಕು ದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕರ್ನಾಟಕ ಕೈಪಿಡಿ, ೧೯೯೬. ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ.

ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ಗಳು

ಆರ್ಕಸಾಲಿ ವೃಷಭೇಂದ್ರಚಾರ್, ೨೦೧೦: ಮಳೆರಾಜ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅಶೋಕ ಎಸ್.ಆಲೂರಾ, ಶಿವಾನಂದ ಬಿ, ಹೊಸಮನಿ, ದಾಸೋಗ ಜಿ.ಎಸ್, ೨೦೧೦: ಬರಡಾಗುತ್ತಿರುವ ನಮ್ಮ ಭೂ ಸಂಪತ್ತು ಹಾಗೂ ಅದರ ರಕ್ಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ೧೯೯೪: ಮಾರ್ಗ-೧, ೨, ೩, ಕರ್ನಾಟಕ ಬುಕ್ ಏಜೆನ್ಸಿ, ಗಾಂಧಿನಗರ, ಬೆಂಗಳೂರು.

ಕೊಟ್ರಯ್ಯ ಸಿ.ಟಿ.ಎಂ., ೨೦೦೯: ವಿಜಯನಗರ ಕಾಲದ ತುಂಗಭದ್ರಾ ನದಿಯ ಅಣೆಕಟ್ಟುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗೋವಿಂದಯ್ಯ ಟಿ, ೧೯೦೪: ಕರ್ನಾಟಕ ನೀರಾವರಿ, ಅರ್ಥಶಾಸ್ತ್ರ ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು.

ಚಿದಾನಂದ ಮೂರ್ತಿ ಎಂ., ೧೯೭೯: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಧ್ರುವನಾರಾಯಣ (ಅನು), ೨೦೦೧: ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ (ಮೂಲ:ಕೊಟ್ರಯ್ಯ.ಸಿ.ಟಿ.ಎಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾರೆಡ್ಡಿ (ಸಂ), ೨೦೦೬: ಹಂಪಿ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನೀಲತ್ತಹಳ್ಳಿ ಕಸ್ತೂರಿ (ಅನು), ೨೦೦೦: ಕರ್ನಾಟಕದಲ್ಲಿ ಕೆರೆ ನೀರಾವರಿ (ಮೂಲ: ದೀಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ.) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಾಟೀಲ ಎಸ್.ವಿ., ದೀಕ್ಷಿತ್ ಲ.ಅ., ೨೦೦೬: ನೀರು ನಿರ್ವಹಣೆ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು.

ಪುಟ್ಟಪ್ಪ ಕೆ.ವಿ., ೧೯೬೪: ನೀರಾವರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಬಸವರಾಜು ಎಲ್., ೨೦೧೧; ಜಾನಪದ ಆಯಾಮಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಠಪತಿ ಜೆ.ವಿ., ೧೯೯೩: ಸುಧಾರಿತ ನೀರಾವರಿ ಪದ್ಧತಿಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮುನಿರಾಜಪ್ಪ (ಸಂ), ೨೦೦೯: ಕರ್ನಾಟಕ ಕೆರೆ ನೀರಾವರಿ ಅಧ್ಯಯನ, ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗ, ರೂರಲ್ ಕಾಲೇಜು, ಕನಕಪುರ.

ಮೂರ್ತಿ ಎನ್.ಎನ್., ೧೯೭೬: ನೀರಾವರಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಮಂಜುನಾಥ್ ಆರ್., ೨೦೦೯: ಕೆರೆ ಕರಗುವ ಸಮಯ, ಕೆ.ಎಚ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು.

ರಮೇಶ ಸ.ಚಿ., ೨೦೧೦: ಕರ್ನಾಟಕ ಜನಪದ ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜರಾಮ ಹೆಗಡೆ (ಸಂ)., ೨೦೦೩: ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಂಗನಾಥ., ೨೦೦೬: ಭಾರತ ಪ್ರಾದೇಶಿಕ ಮತ್ತು ಆರ್ಥಿಕ ಭೂಗೋಳಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಬೆಂಗಳೂರು.

ವಾಸುದೇವನ್ ಸಿ.ಎಸ್., ೨೦೦೧: ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಣ್ಣ, ೨೦೧೦: ವ್ಯವಸಾಯ ಸಂಬಂಧಿ ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮೇಶ, ೨೦೧೧: ಡಣಾಯಕನಕೆರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಸಂಗಪ್ಪ ಚನ್ನಪ್ಪ ಕುಬಸದ, ೧೯೮೩: ನೀರಾವರಿ, ಆನಂದ ಪಬ್ಲಿಕೇಶನ್ಸ್, ಧಾರಾವಾಡ.

ಸಂಪದ್ಗಿರಿ ರಾವ್ ಕೆ. (ಸಂ), ೨೦೦೬: ಕರ್ನಾಟಕ ಪರಂಪರೆ (ಪ್ರಾಗೈತಿಹಾಸ ಕಾಲದಿಂದ ವಿಜಯನಗರ ಸಾಮ್ರಾಜ್ಯದ ಕಾಲದವರೆಗೆ), ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

**ಕನ್ನಡ ಲೇಖನಗಳು**

ಕೃಷ್ಣ, ೨೦೦೬: ವಿಜಯನಗರ ನೀರಾವರಿ ಪದ್ಧತಿ ಒಂದು ಹೊಸ ಸಂಶೋಧನೆ, ವಿಜಯನಗರ ಅಧ್ಯಯನ, ಸಂಪುಟ ೧೧, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಚನ್ನಬಸಪ್ಪ ಎಸ್.ಪಾಟಿಲ, ೧೯೯೬: ಶಾಸನಗಳಲ್ಲಿ ಕಂಡಂತೆ ವಿಜಯನಗರ ಪಟ್ಟಣದ ನೀರಿನ ವ್ಯವಸ್ಥೆ, ವಿಜಯನಗರ ಅಧ್ಯಯನ, ಸಂ.೧, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಬೆಂಗಳೂರು.

ದ್ಯಾಮನಗೌಡ್ರು ವಿ.ಕೆ, ೨೦೦೮: ಕೆರೆ–ಕಟ್ಟೆ, ಹಾನಗಲ್ಲು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಾಲಸುಬ್ರಮಣ್ಯ, ೨೦೦೩: ರಾಜಧಾನಿ ವಿಜಯನಗರ ನೀರು ಪೂರೈಕೆಗಳು, ವಿಜಯನಗರ ಅಧ್ಯಯನ, ಸಂಪುಟ ೮, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

ಮಹದೇವ ಸಿ., ೨೦೦೨: ಕೃಷಿ ಮತ್ತು ನೀರಾವರಿ, ಹೊಸಪೇಟೆ ತಾಲೂಕು ದರ್ಶನ, ಮಹದೇವ ಸಿ., ಸುಬ್ಬಣ್ಣ ರೈ ಎ, ಮಾಧವ ಪೆರಾಜೆ (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವನ್ ಸಿ.ಎಸ್., ೨೦೦೪: ವಿಜಯನಗರ ಪಟ್ಟಣದ ಜಲ ಸಾರಿಗೆ ವ್ಯವಸ್ಥೆ, ವಿಜಯನಗರ ಅಧ್ಯಯನ, ಸಂ-೯, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ. ಹೊಸಪೇಟೆ.

ವಾಸುದೇವನ್ ಸಿ.ಎಸ್., ೨೦೦೭, ವಿಜಯನಗರ ಪಟ್ಟಣದ ಜಲ ಸಾರಿಗೆ ವ್ಯವಸ್ಥೆ, ವಿಜಯನಗರ ಅಧ್ಯಯನ, ಸಂ-೯, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ. ಹೊಸಪೇಟೆ.

**ಪಿ.ಎಚ್.ಡಿ ಮತ್ತು ಎಂ.ಫಿಲ್. ಸಂಶೋಧನಾ ಪ್ರಬಂಧಗಳು**

ಆನಂದಕುಮಾರ್ ಡಿ.ಎನ್., ೨೦೦೮ : ಮಂಡ್ಯ ಜಿಲ್ಲೆಯ ಕೆರೆ ನೀರಾವರಿ ಪದ್ಧತಿ ಒಂದು ಚಾರಿತ್ರಿಕ ಅಧ್ಯಯನ, ಎಂ.ಪಿಲ್, ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಉಮಾದೇವಿ ಮ. ಹಂಚಿನಮನಿ, ೨೦೦೯: ಜಮಖಂಡಿಯ ಕೆರೆಗಳು, ಎಂ.ಪಿಲ್, ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಧನಂಜಯ ಸಿ., ೨೦೧೧: ಪಾವಗಡ ತಾಲೂಕು ಕೆರೆಗಳು, ಎಂ.ಪಿಲ್, ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪದಕೋಶ**

ಆಣೆಕಟ್ಟು – ನದಿ, ಹಳ್ಳ ಮೊದಲಾದವುಗಳ ನೀರನ್ನು ತಡೆಯಲು ಹಾಕಿರುವ ಅಡ್ಡಗಟ್ಟೆ

ಅಮಾನಿ – ಸರ್ಕಾರಿ ಅಧಿಕಾರಿಗಳ ನೇರ ಉಸ್ತುವಾರಿಯಲ್ಲಿ ಇರುವ ಭೂಮಿ.

ಆಯಕಟ್ಟು – ನೀರಾವರಿ ಸೌಲಭ್ಯವನ್ನು ಹೊಂದಿರುವ ಕೃಷಿಭೂಮಿ, ಜಮೀನು, ಗದ್ದೆ.

ಊಟೆಕಾಲುವೆ – ಊಟೆ ನೀರಿನ ಕಾಲುವೆ.

ಏರಿ – ಕೆರೆ, ಕೆರೆಯ ಕಟ್ಟೆ

ಕಟ್ಟುಕೊಡುಗೆ, – ಕೆರೆ ಉಸ್ತುವಾರಿ ಮತ್ತು ಸಂರಕ್ಷಣೆಗಾಗಿ ನೀಡಿದ ಮಾನ್ಯ (ಗದ್ದೆ).

ಕಟ್ಟುಮಾನ್ಯ – ಕೆರೆ ಉಸ್ತುವಾರಿ ಮತ್ತು ಸಂರಕ್ಷಣೆಗಾಗಿ ನೀಡಿದ ಮಾನ್ಯ.

ಕೂರಿಗೆ – ಹೊಲಗಳಲ್ಲಿ ಬೀಜ ಬಿತ್ತಲು ಬಳಸುವ ಉಪಕರಣ.

ಕೆರೆ, ಕಟ್ಟೆ, ಕುಂಟೆ, ಕೊಳ – ಏರಿ ನಿರ್ಮಿಸಿ ನೀರು ಸಂಗ್ರಹಿಸುವ ಜಲಾಶಯ.

ಕೆರೆಬಂಡಿ – ಕೆರೆ ಏರಿಯ ಸಂರಕ್ಷಣೆಗಾಗಿ ಏರ್ಪಡಿಸಲಾಗುತ್ತಿದ್ದ ಎತ್ತಿನ ಬಂಡಿ.

ಕೆರೆಬಂಡಿ ಹಣ – ಕೆರೆ ಏರಿಯ ಸಂರಕ್ಷಣೆಗಾಗಿ ಬೇಕಾದ ಎತ್ತಿನ ಬಂಡಿಯ ವ್ಯವಸ್ಥೆಗಾಗಿ ಸ್ಥಳೀಯವಾಗಿ ಸಂಗ್ರಹಿಸುತ್ತಿದ್ದ ತೆರಿಗೆ

ಕೋಡಿ – ಕೆರೆ ಕಟ್ಟೆಗಳ ಹೆಚ್ಚು ನೀರು ಹರಿದು ಹೋಗಲು ಮಾಡಿದ ದಾರಿ.

ಖುಷ್ಕಿ – ಮಳೆ ನೀರಿನಿಂದ ಮಾಡುವ ಬೇಸಾಯ.

ಗದ್ದೆ – ತರಿ ಜಮೀನು, ಭತ್ತ, ಕಬ್ಬು, ನೀರಾವರಿ ಪೈರುಗಳನ್ನು ಬೆಳೆಯುವ ಭೂಮಿ.

ಚಕ್ಕಡಿ – ಒಂದು ಎತ್ತಿನ ಗಾಡಿ.

ಜಲಸೂತ್ರಧಾರಿ – ನೀರಾವರಿ ಕಾಮಗಾರಿಗಳ ಶಾಸ್ತ್ರಜ್ಞ

ತರಿ – ನೀರಾವರಿ ಭೂಮಿ, ಗದ್ದೆ.

ತಳಾರಿ, ತಳಾರ, ತಳವಾರ – ಹಳ್ಳಿಯ ಕಾವಲುಗಾರ, ಅಧಿಕಾರಿಗಳಿಗೆ ಮಾಹಿತಿ ನೀಡುವುದು ಇವನ ಕರ್ತವ್ಯ.

ತೂಬು – ನೀರನ್ನು ಕೆರೆಯಿಂದ ಹಾಯಿಸುವ ಭಾಗ.

ದಸವಂದ ಭೂಮಿ – ಕೆರೆ ನಿರ್ಮಾಣ ಮತ್ತು ಉಸ್ತುವಾರಿಗೆ ದಾನವಾಗಿ ನೀಡಿದ ಭೂಮಿ.

| | | |
|---|---|---|
| ದೇವಮಾತೃಕೆ | – | ಮಳೆಯ ನೀರಿನಿಂದಲೇ ಸಾಗುವಳಿ ಮಾಡುವ ಜಮೀನು. |
| ನದಿ ಮಾತೃಕೆ | – | ನದಿ ನೀರಿನ ಕಾಲುವೆ. |
| ನದಿ, ತಟಾಕ | – | ನದಿ ನೀರನ್ನು ಪಡೆಯುವ ಕೆರೆ. |
| ನೀರ್ಗಂಟಿ | – | ಕೆರೆ ನೀರು ಸರಬರಾಜು ವ್ಯವಸ್ಥೆಯನ್ನು ನಿರ್ವಹಿಸುವ ನಿರ್ವಾಹಕ. |
| ಮತ್ತರ | – | ಭೂ ಅಳತೆ. |
| ಮತ್ತರು | – | ಭೂಮಿ ಅಳತೆ, ಸುಮಾರು ನಾಲ್ಕು ಅಥವಾ ಐದು ಎಕರೆಗೆ ಸಮ. |
| ಮಾನ್ಯ | – | ತೆರಿಗೆ ವಿನಾಯಿತಿ. |
| ವಿಲೇವಾರಿ | – | ಕೆರೆಯಲ್ಲಿ ಮೀನು ಹಿಡಿಯುವ ಗುತ್ತಿಗೆಯಿಂದ ಬಂದ ಹಣ. |
| ಸಮುದ್ರ | – | ವಿಶಾಲ ನೀರಿನ ಹರಿವಿನಿಂದ ಕೂಡಿದ ಕೆರೆ. |

## ಬಯಕಾರ ರಾಮಪ್ಪನ ಕೆರೆಗಳ ಕೋಷ್ಟಕ

| ಕ್ರಂ.ಸಂ | ಕೆರೆಗಳು | ಊರುಗಳು | ತಾಲೂಕು | ಕಟ್ಟಿಸಿದ ವರ್ಷ | ಕೆರೆಯ ಸ್ಥಿತಿ |
|---|---|---|---|---|---|
| ೧ | ಪೆದ್ದಲಕ್ಕ ಸಮುದ್ರ | ಚಿಕ್ಕಕೆರೆಯಾಗಿನಹಳ್ಳಿ | ಸಂಡೂರು | ೧೫೩೯ | ಉತ್ತಮ |
| ೨ | ಅಚ್ಚುತಮ್ಮ ಸಮುದ್ರ | ಹುಲಿಕುಂಟೆ ೭೩ | ಸಂಡೂರು | ೧೫೫೬ | ಉತ್ತಮ |
| ೩ | ಅಕ್ಕ ಸಮುದ್ರ | ಪೋತಲಕಟ್ಟೆ | ಹೊಸಪೇಟೆ | ೧೫೩೯ | ಸಾಧರಣ |
| ೪ | ಬಾಚ ಸಮುದ್ರ | ತಿಮ್ಮಲಾಪುರ | ಹೊಸಪೇಟೆ | ೧೫೩೯ | ಸಾಧರಣ |
| ೫ | ವೀರ ಸಮುದ್ರ | ವಂಟಿಗೂಡು | ಹೊಸಪೇಟೆ | ೧೫೩೯ | ಕನಿಷ್ಟ |
| ೬ | ನಡುವಲ ಕೆರೆ | ತಿಮ್ಮಲಾಪುರ | ಹೊಸಪೇಟೆ | – | ಸಾಧರಣ |
| ೭ | ಅಮಂ ಸಮುದ್ರ | ಹಾರವನಹಳ್ಳಿ | ಹೊಸಪೇಟೆ | ೧೫೩೯ | ಕನಿಷ್ಟ |
| ೮ | ಚಿಲಕನಹಟ್ಟಿ ಕೆರೆ | ಚಿಲಕನಹಟ್ಟಿ | ಹೊಸಪೇಟೆ | – | ಸಾಧರಣ |
| ೯ | ಬ. ರಾಮಪ್ಪನ ಕೆರೆ | ಗೊಲ್ಲರಹಳ್ಳಿ | ಹೊಸಪೇಟೆ | ೧೫೫೬ | ಸಾಧರಣ |
| ೧೦ | ಚಿಕ್ಕಲಕ್ಕ ಸಮುದ್ರ | ಮಗಿಮಾವಿನಹಳ್ಳಿ | ಹಗರಿಬೊಮ್ಮನಹಳ್ಳಿ | ೧೫೪೪ | ಉತ್ತಮ |
| ೧೧ | ಕಾಮಸಮುದ್ರ | ಮಗಿಮಾವಿನಹಳ್ಳಿ | ಹಗರಿಬೊಮ್ಮನಹಳ್ಳಿ | ೧೫೩೯ | ಉತ್ತಮ |
| ೧೨ | ಪೆದ್ದ ತಿಮ್ಮಸಮುದ್ರ | ನಂದಿಬಂಡೆ | ಹಗರಿಬೊಮ್ಮನಹಳ್ಳಿ | ೧೫೩೯ | ಸಾಧರಣ |
| ೧೩ | ಅಚ್ಚುತ ಸಮುದ್ರ | ಚಿಕ್ಕ ಗಂಡಸಿ | ಅರಸೀಕೆರೆ | ೧೫೩೫ | ಕನಿಷ್ಟ |



KARNATAKA
DISTRICT
N
MAHARASHTRA
BIDAR
Bidar
Kalaburagi
GULBARGA
TELANGANA
Vijayapura
VIJAYAPURA
Yadgir
YADGIR
Bagalkot
BAGALKOT
Raichur
RAICHUR
BELGAUM
Belagavi
DHARWAD
Dharwad
Gadag
GADAG
KOPPAL
Koppal
GOA
ANDHRA PRADESH
Ballari
BELLARY
Karwar
UTTARA KANNADA
HAVERI
Haveri
Davangere
DAVANGERE
Chitradurga
CHITRADURGA
LEGEND
State Boundary
District Boundary
State Headquarter
District Headquarter
SHIVAMOGGA
Shivamogga
CHIKKABALLAPUR
Chikkaballapura
TUMAKURU
Tumakuru
UDUPI
Udupi
CHIKKAMAGALURU
Chikkamagaluru
BENGALURU RURAL
Bengaluru
BENGALURU
Kolar
KOLAR
HASSAN
Hassan
Mangaluru
DAKSHINA KANNADA
MANDYA
Mandya
Channapatna
RAMANAGARA
Coorg
KODAGU
Mysuru
MYSURU
CHAMARAJANAGAR
Chamarajanagar
TAMIL NADU
KERALA
Map not to Scale
Copyright © 2017 www.mapsofindia.com


ಕರ್ನಾಟಕ ಭೂಪಟ


BELLARY
RIVER MAP
RAICHUR
KOPPAL
GADAG
HAVERI
DEVANGERE
CHITTRADURGA
ANDHRA PRADESH
Kottalchinta
Rarav
Nittur
Kuriganur
Kampi
Sanavasapura
Upparahalli
Sindavala
HOSPET
Hosaderoji
Sidaragadda
Toranagallu
Gunda Road
BALLARI
SANDUR
Belagal
Mallanakere
Rupanagudi
BOMMANAHALLI
Rajapur
HUVVINAHADAGALLI
KUDLIGI
Svamihalli
Mahajanahalli
Doopadahalli
Holalu
Halsagara
Kotturu
Huralihalu
Nibalageri
LEGEND
River
District Boundary
State Boundary
District HQ
Other Town
Major Town
Map not to Scale
Copyright © 2014 www.mapsofindia.com
(Updated on 17th November 2014)

ಬಳ್ಳಾರಿ ಭೂಪಟ



ಪೋತಲಕಟ್ಟೆಲ್ಲಿರುವ ಅಕ್ಕ ಸಮುದ್ರದ ಅಂಗಳ (ಪೋತಲಕಟ್ಟೆ ಕೆರೆ)



ಪೋತಲಕಟ್ಟೆ ಕೆರೆ ಏರಿಯಾ ಮೇಲಿರುವ ಮಕ್ಕಳಮ್ಮ ದೇವಾಸ್ಥಾನ



ಬಯಕಾರ ರಾಮಪ್ಪನ ಪೋತಲಕಟ್ಟೆ ಕೆರೆಯ ಶಾಸನ ಇಂದು ಶಾಸನ ವಿಭಾಗ (ಕನ್ನಡ ವಿಶ್ವವಿದ್ಯಾಲಯ)ದಲ್ಲಿದೆ.



ಅಮಂಸಮುದ್ರ (ಕೆರೆಯ) ಶಾಸನ ಇಂದು ಕನ್ನಡ ವಿಶ್ವವಿದ್ಯಾಲಯದ ಶಾಸನ ವಿಭಾಗದ ಮುಂದಿದೆ.



ತಿಮ್ಮಲಾಪುರದ ಬಾಚ ಸಮುದ್ರಂ (ಜಂಭಯ್ಯನ ಕೆರೆ)



ತಿಮ್ಮಲಾಪುರದ ನಡುವಲಕೆರೆಯ ತೂಬು ಇಂದು ದುಸ್ಥಿತಿಯಲಿದೆ.



ತಿಮ್ಮಲಾಪುರದ ನಡುವಲಕೆರೆಯ ವಿಶಾಲವಾದ ಕೆರೆಯ ಅಂಗಳ ನೀರಿಲ್ಲದೆ ಬರುಡಾಗಿರುವುದು.



ಗೋಪಾಲಕೃಷ್ಣ ದೇವಾಲದ ಮುಖಮಂಟಪದಲ್ಲಿರುವ ಬಯಕಾರ ರಾಮಪ್ಪನ ಶಾಸನ



ಬಾಚಸಮುದ್ರದ (ಜಂಭಯ್ಯನ ಕೆರೆ) ಏರಿಯಾ ಮೇಲಿರುವ ಬಸವಣ್ಣ ದೇವಾಲಯ



ವಂಟಿಗೂಡು ಕೆರೆಯ ತೂಬು ಮತ್ತು ಕೆರೆಯ ಅಂಗಳ



ಬಾಲಕೃಷ್ಣ ದೇವಾಲಯದ ಮುಂಭಾಗದಲ್ಲಿರುವ ಶಾಸನ (ಹುಲಿಕುಂಟೆ ೭೩)



ಹಾರವನಹಳ್ಳಿ (ಅಮಂ ಸಮುದ್ರ) ಕೆರೆಯ ಅಂಗಳ.



ಹಾರವನಹಳ್ಳಿ ಕೆರೆಯಲ್ಲಿರುವ ಹಾಳಾಗಿರುವ ತೂಬು



ಆಂಜಿನೇಯ್ಯ ದೇವಾಸ್ಥಾನದ ಪಕ್ಕದಲ್ಲಿರುವ ಬಯಕಾರ ರಾಮಪ್ಪನ ಶಾಸನ



ಚಿಕ್ಕ ಕೆರೆಯಾಗಿನಹಳ್ಳಿಯ ಕೆರೆ (ಪೆದ್ದಲಕ್ಕ ಸಮುದ್ರ)ಯ ನೋಟ



ಚಿಕ್ಕಕೆರೆಯಾಗಿನಹಳ್ಳಿ ಕೆರೆಯ ಏರಿಯಾ ಕೆಳಗೆ ಇರುವ ಬಯಾಕಾರ ರಾಮಪ್ಪನ ವಂಶಾವಳಿ ಶಾಸನ



ಕೆರೆಯ ಏರಿಗೆ ಹೊಂದಿಕೊಂಡತೆ ಇರುವ ಶಾಸನ ಹುಲಿಕುಂಟೆ

ಹುಲಿಕುಂಟೆ ಕೆರೆ (ಅಚ್ಯುತಮ್ಮ ಸಮುದ್ರಂ) ಏರಿಯಾ ಗೋಡೆ



ಕೆರೆಯ ಅಚ್ಚುಕಟ್ಟು ಪ್ರದೇಶ (ಹುಲಿಕುಂಟೆ)

ಅಚ್ಯುತಮ್ಮ ಸಮುದ್ರ (ಹುಲಿಕುಂಟೆ)ಯ ತೂಬು



ಗೊಲ್ಲರಹಳ್ಳಿಯಲ್ಲಿರುವ ಕೆರೆಯ ದೃಶ್ಯ



ಗೊಲ್ಲರಹಳ್ಳಿ ಕೆರೆಯ ಕೋಡಿ



ಮಗಿಮಾವಿನಹಳ್ಳಿಯಲ್ಲಿರುವ ಚಿಕ್ಕಲಕ್ಕ ಸಮುದ್ರ



ಕೆರೆಯ ಅಂಗಳ ಮಗಿಮಾವಿನಹಳ್ಳಿ (ಕಾಮಸಮುದ್ರ)

